Master has a set of responsibilities, so do the teachers and the peons. The Head Master is not supposed to do the duties of a Peon and so does the peon can't perform the functions, which are the responsibilities of a Teacher. Similarly, the people belonging to different Varnaas have to perform Karmaas assigned to their respective varnaas only and should not overstep their limits.

Just as smoke is inseparable from fire, so are the most Karmaas inseparable from defects. So, it doesn't mean that the Karmaas have to be completely denounced!

Thus, a dedicated practitioner, who performs the Karmaas without bothering about its outcome, has to observe the following Dharmaas. He should have an unsullied intellect so that he has a pure mind. He should lead a solitary life. He should have a light diet. He should have complete control over his mind, speech and body. He should stop the love – hate relationships. He should ponder over the Lord and nothing apart from it. He should have renounced the world. He should completely abandon arrogance, strength, pride, desires, wrath, and egoism. Only such an achiever can become a devoted devotee of the "Parabrahman". He then gets rid of all his sorrows and the worldly desires. As detailed in the sixth chapter, he then develops the "Saamya Jnaana", which would increase his devotion towards me, which would then entice him to listen to more and more stories of me and then meditate upon them, which guarantees that he gets the celestial knowledge in the end and that is the permit, which he should have to get into my abode.

To put it in a nutshell, one has to perform the stipulated Karmaas and the Dhyana, which would please the almighty and he gets one the salvation. So, oh! Arjuna, meditate that I am the Lord of the Lords, and ponder upon me forever. That would ensure that you come out of the vicious cycle of birth and death. Else, if you think that you are independent and forgets me, then, you would be lost!

Arjuna, you are hesitant to take up the arms, for the reason that you are of the opinion that you are doing all these on your own. But, be assured, you will take up the arms, for I instigate you to do so, based upon your very nature. The god is omnipresent. He stays in the hearts of all the souls and instigates the souls based upon their previous Karma. So, seek refuge in him. Seeking refuge does not simply mean that you have to pray him by mantraas such as "sharanam prapadye", but, it means that you have to completely surrender to him, both physically and mentally in toto. You should always remember that you are his subordinate. You

should have full confidence in the fact that the Lord is the ultimate protector. And this is the way to reach me!

Arjuna! I have taught you the most secret of the knowledge. So, you analyze and act. It is not that Lord Sri Krishna has permitted Arjuna to act according to his whims and fancies. Instead, he has indicated that he has done his job of professing Arjuna and now the ball is in Arjuna's court and he is free to act according to his conscious.

Arjuna! I would summarize the whole lot of my teachings to you for your benefit. Have a devout mind upon me. Worship me. Prostrate before me. These would ensure you attain me. Leave all non-vaishnava dharmaas and seek refuge in me. I would liberate you from all the sins. So, don't sorrow upon being sinned.

Don't teach this Geetha to those who are lacking in "Tapas". But, if they have served their Gurus, then, teach them this plethora of knowledge. Else, if they have not done enough service to their Gurus, but, if they are the staunch devotees of Lord Sri Hari and the Guru, then, they too can listen to this. At no point of time, share this knowledge with one, who is not a devotee. But, a person, with a lesser Bhakti too can listen to this, but, definitely not the one, who is jealous about me!

Arjuna! Those who teach this Bhagavad Gita, which is in the form of conversation between you and me, to others as stipulated above, are bound to increase their devotion upon me and are sure to attain me. Have no doubt on this. I love those humans, the most, who teaches this Gita. It doesn't mean that these humans are loved the most, even more than the Deities and Rishis.

Those who are not capable of making a critical analysis of this Gita, but, study them from Guru too please me from this "Jnaana Yajna". Also, those who listen to the Gita with untainted devotion too would attain the ultimate abode of me.

Arjuna, I hope that you have carefully listened to my sermons and fully understood it. I presume that this has not gone wasted and I conclude that all your doubts have now vanished.

Listening to the thus speaking Sri Krishna, Arjuna responds. Oh! Parama Purusha, the one who can neither be destroyed nor dissipated nor decimated, all my doubts have now abandoned me. I would simply obey your orders. I am ready with my bows and arrows and would pounce upon the enemy numbers.

Sanjaya, who was narrating the whole of this Gita to Dhrutarashtra, concludes thus. Oh! King, I have narrated you the most marvelous, the most thrilling

conversation between Lord Sri Krishna and Arjuna live! No one has taught this to me. I have seen and listened to this when Lord Sri Krishna was preaching Arjuna! I am being repeatedly thrilled and astonished just at the remembrance of Lord's Vishwaroopa.

Oh! Rajan, have no doubt! Wherever there is Lord Sri Krishna and Arjuna, who is holding the bow named "Ghaandeeva", the victory, the riches, the prosperity and the moral, are bound to be there! So, don't even have a faint of hope that your sons would emerge victorious in this epic battle! The Paandavaas are the sure winners!

**Thus is the substance of the Eighteenth Chapter**

# ಶ್ರೀಮದ್ಭಗವದ್ಗೀತಾಸಾರಸಂಗ್ರಹ

## ಪ್ರಥಮಾಧ್ಯಾಯಸಾರ

ಮಹಾಭಾರತವು ಎಲ್ಲಾ ಶಾಸ್ತ್ರಗಳ ಸಾರ. ಭಗವದ್ಗೀತೆಯು ಮಹಾಭಾರತದ ಸಾರ. ಮಹಾಭಾರತವು ಪಾರಿಜಾತದಂತೆ ಇದ್ದರೆ ಭಗವದ್ಗೀತೆಯು ಆ ಪಾರಿಜಾತದ ಮಧುವಂತಿದೆ. ಗೀತೆಯಲ್ಲಿ ಒಟ್ಟು 18 ಅಧ್ಯಾಯಗಳಿವೆ. ಇದನ್ನು ಆರು ಆರು ಅಧ್ಯಾಯಗಳಂತೆ ಮೂರು ಭಾಗ ಮಾಡಬಹುದು. ಆರು ಅಧ್ಯಾಯಗಳ ಗುಂಪಿಗೆ ಷಟ್ಕ ಎನ್ನುತ್ತಾರೆ. ಮೊದಲನೆಯ ಷಟ್ಕದಲ್ಲಿ ಭಗವದ್‌ಜ್ಞಾನದ ಸಾಧನೆಯನ್ನು ಹೇಳಲಾಗಿದೆ. ಎರಡನೆಯ ಷಟ್ಕದಲ್ಲಿ ಭಗವದ್‌ಜ್ಞಾನವನ್ನು ಉಪದೇಶ ಮಾಡಲಾಗಿದೆ. ಮೂರನೆಯ ಷಟ್ಕದಲ್ಲಿ ಈ ಎರಡುಷಟ್ಕಗಳ ವಿಷಯವನ್ನೇ ವಿಶದಮಾಡಲಾಗಿದೆ. ಅದರಲ್ಲೂ ಕಡೆಯ ಅಧ್ಯಾಯವು ಉಳಿದ 17 ಅಧ್ಯಾಯಗಳ ಸಂಗ್ರಹಾತ್ಮಕವಾದದ್ದು.

ಅದರಲ್ಲಿ ಮೊದಲನೆಯ ಅಧ್ಯಾಯ ಹಾಗೂ ಎರಡನೆಯ ಅಧ್ಯಾಯದ 10 ಶ್ಲೋಕಗಳು ಭಗವನಂತನ ಉಪದೇಶಕ್ಕೆ ಪೀಠಿಕಾರೂಪವಾದದ್ದು. ಭೀಷ್ಮರು ಶರಮಂಚದಲ್ಲಿ ಬಿದ್ದ ಸುದ್ದಿಯನ್ನು ಕೇಳಿದ ಧೃತರಾಷ್ಟ್ರನು ವಿಸ್ತಾರವಾಗಿ ಕೇಳಲು ಬಯಸುತ್ತಾನೆ. ಆಗ ಸಂಜಯನು ವೇದವ್ಯಾಸದೇವರು ಕೊಟ್ಟಿರುವ ವಿಜ್ಞಾನದಿಂದ ರಣಾಂಗಣದಲ್ಲಿ ನಡೆಯುತ್ತಿರುವ ಎಲ್ಲಾ ವಿಷಯಗಳನ್ನೂ ಕಂಡು ಹಾಗೂ ಕೇಳಿ ಧೃತರಾಷ್ಟ್ರನಿಗೆ ವರದಿ ಮಾಡುತ್ತಾನೆ.

ಮೊದಲಿಗೆ ಧೃತರಾಷ್ಟ್ರರು ಪ್ರಶ್ನೆ ಮಾಡುತ್ತಾರೆ. 'ಎಲೈ! ಸಂಜಯ, ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಯುದ್ಧ ಮಾಡಲು ಸೇರಿದ ನಮ್ಮವರು ಮತ್ತು ಪಾಂಡವರು ಏನು ಮಾಡಿದರು?' ಎಂಬುದಾಗಿ. ಶ್ರೀಕೃಷ್ಣನು ಪಾಂಡವರ ಕಡೆ ಇರುವಾಗ ಪಾಂಡವರಿಗೇ ಜಯ ಎಂಬುವುದು ಸಿದ್ಧವಾಗಿದೆ. ಆದರೂ ಮಗನ ಮೇಲಿನ ದುರಭಿಮಾನದಿಂದ ತನ್ನ ಮಕ್ಕಳು ಗೆದ್ದರೋ? ಎಂದು ತಿಳಿದುಕೊಳ್ಳುವ ಕುತೂಹಲ ಧೃತರಾಷ್ಟ್ರನಿಗೆ.

ಆಗ ಸಂಜಯನು ಉತ್ತರಿಸುತ್ತಾನೆ. ಪಾಂಡವಸೈನ್ಯವು ವ್ಯೂಹರೂಪವಾಗಿ ರಚಿತವಾಗಿತ್ತು. ಇದನ್ನು ಕಂಡ ದುರ್ಯೋಧನನು ಗುರುಗಳಾದ ದ್ರೋಣಾಚಾರ್ಯರ ಬಳಿಗೆ ಬಂದು ಮಾತನಾಡಿದ.'ನೋಡಿ! ಗುರುಗಳೇ, ನಿಮ್ಮ ಶಿಷ್ಯನಾದ ಧೃಷ್ಟದ್ಯುಮ್ನನು ನಿಮಗೇ ಎದುರಾಗಿ ಯುದ್ಧಕ್ಕಾಗಿ ಸೈನ್ಯಸಮೇತ ಬಂದಿದ್ದಾನೆ. ಆ ಪಾಂಡವರ ಸೈನ್ಯದಲ್ಲಿ ಭೀಮ-ಅರ್ಜುನರಿಗೆ ಸದೃಶರಾದ ವಿರಾಟ, ದ್ರುಪದ, ಕುಂತಿಭೋಜ, ಸಾತ್ಯಕಿ, ಅಭಿಮನ್ಯು ಮೊದಲಾಗಿ ಅನೇಕ ಮಹಾರಥಿಕರು ಇದ್ದಾರೆ. ನಮ್ಮ ಕಡೆ ತಾವು, ಭೀಷ್ಮರು, ಕೃಪಾಚಾರ್ಯರು, ಅಶ್ವತ್ಥಾಮಾಚಾರ್ಯರು, ಕರ್ಣ, ಶಲ್ಯಮಹಾರಾಜ ಮೊದಲಾದ ಅನೇಕ ವೀರಾಗ್ರಣಿಗಳು ಇದ್ದಾರೆ. ಇವರೆಲ್ಲರೂ ನನಗೋಸ್ಕರ ದೇಹ ಬಿಡಲು ಸಿದ್ಧವಾಗಿದ್ದಾರೆ. ಇಷ್ಟಾದರೂ ಭೀಮನು ಮುಂದಾಳಾಗಿರುವ ಪಾಂಡವರ ಸೈನ್ಯವು ನಮ್ಮನ್ನು ಗೆದ್ದು ಬಿಡುತ್ತದೆ ಎಂದು ನನಗೆ ಅನಿಸುತ್ತದೆ.

ನಮ್ಮ ಸೈನ್ಯವು ಭೀಷ್ಮರಿಂದ ರಕ್ಷಿತವಾಗಿದ್ದರೂ ಪಾಂಡವರನ್ನು ಗೆಲ್ಲಲಾರದು ಎನಿಸುತ್ತದೆ. ಭೀಷ್ಮರು ಮತ್ತೊಬ್ಬರ ಜೊತೆ ಯುದ್ಧ ಮಾಡುತ್ತಿದ್ದಾಗ ಅವರನ್ನು ಬೇರೊಬ್ಬರು ಸಂಹಾರ ಮಾಡದಂತೆ ನೀವೆಲ್ಲರೂ ಎಚ್ಚರಿಕೆ ವಹಿಸಬೇಕು.'

ಹೀಗೆ ದುರ್ಯೋಧನನ ಮಾತನ್ನು ಕೇಳಿ ಅವನನ್ನು ಸಂತೋಷಪಡಿಸಲು ಭೀಷ್ಮರು ಘಟ್ಟಿಯಾಗಿ ಸಿಂಹನಾದ ಮಾಡಿ ಶಂಖವನ್ನು ಊದಿದರು. ಇದನ್ನು ಅನುಸರಿಸಿ ಕೌರವರಕಡೆಯ ಸೈನಿಕರು ಶಂಖ, ಆನಕ, ಕೊಂಬು, ಕಹಳೆಗಳನ್ನು ಮುಗಿಲು ಮುಟ್ಟುವಂತೆ ಮೊಳಗಿಸಿದರು. ಇದಕ್ಕೆ ಪ್ರತಿಯಾಗಿ ಪಾಂಡವರ ಕಡೆಯವರು ತಮ್ಮ ತಮ್ಮ ಶಂಖಗಳನ್ನು ಊದಿದರು. ಶ್ರೀಕೃಷ್ಣನು ಪಾಂಚಜನ್ಯ ಎಂಬ ಶಂಖವನ್ನು, ಧರ್ಮರಾಜರು ಅನಂತವಿಜಯ ಎಂಬ ಶಂಖವನ್ನು, ಭೀಮಸೇನದೇವರು

ಪೌಂಡ್ರ ಎಂಬ ಶಂಖವನ್ನು, ಅರ್ಜುನರು ದೇವದತ್ತ ಎಂಬ ಶಂಖವನ್ನು, ನಕುಲ-ಸಹದೇವರು ಸುಘೋಷ ಮತ್ತು ಮಣಿಪುಷ್ಪಕ ಎಂಬ ಶಂಖಗಳನ್ನು, ಅಭಿಮನ್ಯು ಮೊದಲಾದವರು ತಮ್ಮ ತಮ್ಮ ಶಂಖಗಳನ್ನು ಘಟ್ಟಿಯಾಗಿ ಊದಿದರು. ರೋಮಾಂಚಕಾರಿಯಾದ ಆ ಶಬ್ದವು ಕೌರವರ ಎದೆಯನ್ನು ಸೀಳಿತು.

ನಾಲ್ಕು ಬಿಳಿಕುದುರೆಕಟ್ಟಿರುವ ರಥದಲ್ಲಿ ಕುಳಿತು ಶ್ರೀಕೃಷ್ಣಾರ್ಜುನರು ಬಂದರು. ಅರ್ಜುನರು ತನಗೆ ಸಹಾಯಕರು ಯಾರು? ತಾವು ಯಾರ ಮೇಲೆ ಯುದ್ಧ ಮಾಡಬೇಕಾಗಿದೆ ಎಂಬುವದನ್ನು ನೋಡಲು ಅಪೇಕ್ಷಿಸಿದರು. ಇದಕ್ಕಾಗಿ ಎರಡು ಸೈನ್ಯದ ನಡುವೆ ರಥವನ್ನು ನಿಲ್ಲಿಸುವಂತೆ ಶ್ರೀಕೃಷ್ಣನನ್ನು ಪ್ರಾರ್ಥಿಸಿದರು. ಅದರಂತೆ ಶ್ರೀಕೃಷ್ಣನು ಎರಡು ಸೈನ್ಯದ ನಡುವೆ ರಥವನ್ನು ನಿಲ್ಲಿಸಿದನು. ಅರ್ಜುನರು ನೋಡಿದಾಗ ಗುರುಗಳು, ಆಚಾರ್ಯರು, ಅಣ್ಣ-ತಮ್ಮಂದಿರು, ಮಕ್ಕಳು, ಮೊಮ್ಮಕ್ಕಳು, ಸೋದರಮಾವ, ಹೆಣ್ಣುಕೊಟ್ಟಮಾವ, ಭಾವಮೈದುನ ಮೊದಲಾದ ಬಂಧುಗಳನ್ನು ಕಂಡರು.

ಕ್ಷತ್ರಿಯನಿಗೆ ವಿಷ್ಣು, ವೈಷ್ಣವದ್ವೇಷಿಗಳ ಹಾಗೂ ಅವರ ಅನುಬಂಧಿಗಳ ನಿಗ್ರಹವೇ ಪರಮಧರ್ಮ. ಅದಕ್ಕೆ ವಿರುದ್ಧವಾದದ್ದೆಲ್ಲವೂ ಅಧರ್ಮ. ಹೀಗಿದ್ದರೂ ಬಂಧುಮೋಹದಿಂದ ಅರ್ಜುನರು ಇವರನ್ನು ಕೊಲ್ಲುವುದು ಅಧರ್ಮ ಎಂದುಕೊಂಡರು. ಶ್ರೀಕೃಷ್ಣನನ್ನು ಕುರಿತು ಹೀಗೆ ಮಾತನಾಡಿದರು.

'ಸ್ವಾಮಿ! ಸಾಯಲು ಸಿದ್ಧವಾಗಿರುವ ಈ ಬಂಧುಜನಗಳನ್ನು ನೋಡಿ ನನಗೆ ನಡುಕ ಬರುತ್ತದೆ. ಗಾಂಡೀವಧನುಸ್ಸು ಕೈಯಿಂದ ಜಾರುತ್ತಿದೆ. ಜ್ವರ ಬಂದಂತೆ ಮೈಯಲ್ಲ ಸುಡುತ್ತಿದೆ. ನಿಲ್ಲಲು ಆಗುತ್ತಿಲ್ಲ. ತಲೆ ತಿರುಗುತ್ತಿದೆ. ರಾಜ್ಯಲೋಭದಿಂದ ಇವರನ್ನು ಕೊಲ್ಲುವುದು ಯೋಗ್ಯವಲ್ಲ. ಆತತಾಯಿಗಳನ್ನು ವಿಚಾರ ಮಾಡದೇ ಕೊಲ್ಲಬಹುದು ಎಂದಿದ್ದರೂ ಸಹ ಆತತಾಯಿಗಳನ್ನು ಕೊಲ್ಲುವಾಗ ಬಂಧುಗಳನ್ನೂ ಕೊಂದಂತೆ ಆಗುತ್ತದೆ. ಯದ್ಯಪಿ ಕೌರವರು ಈ ಪಾಪಕ್ಕೆ ಹೆದರುತ್ತಿಲ್ಲ. ಆದರೆ ನಾವು ಹೇಗೆ ಹೆದರದೇ ಇರುವುದು. ಈ ಯುದ್ಧವು ಕುಲನಾಶಕರ. ಕುಲವು ನಷ್ಟವಾದರೆ ಕುಲಧರ್ಮಗಳು ಹಾಳಾಗುತ್ತವೆ. ಧರ್ಮವು ಹಾಳಾದಾಗ ಅಧರ್ಮವು ಮೆಟ್ಟಿಕೊಳ್ಳುತ್ತದೆ. ಇದರಿಂದಾಗಿ ಕುಲಸ್ತ್ರೀಯರು ಕೆಡುತ್ತಾರೆ. ಕುಲಸ್ತ್ರೀಯರು ಕೆಟ್ಟರೆ ವರ್ಣಸಾಂಕರ್ಯ ಉಂಟಾಗುತ್ತದೆ. ವರ್ಣಸಾಂಕರ್ಯದಿಂದ ಕುಲನಾಶ ಮಾಡಿದವರಿಗೂ, ಕುಲಕ್ಕೂ ಸಹ ನರಕ ಪ್ರಾಪ್ತಿಯಾಗುತ್ತದೆ. ಹೀಗಾಗಿ ನಾವು ಮಹಾ ಪಾಪವನ್ನು ಮಾಡಲು ಹೊರಟಿದ್ದೇವೆ.'

ಹೀಗೆ ಹೇಳಿ ಬಿಲ್ಲು, ಬಾಣಗಳನ್ನು ಕೆಳಗೆ ಇಟ್ಟು ಅತಿದುಃಖದಿಂದ ಏನೂ ಮಾಡಲು ತೋರದೇ ಸುಮ್ಮನೆ ಕುಳಿತುಬಿಟ್ಟರು.

## ದ್ವಿತೀಯಾಧ್ಯಾಯಸಾರ

ಈ ಅರ್ಜುನರ ಮಾತನ್ನು ಕೇಳಿ ಶ್ರೀಕೃಷ್ಣನು, 'ಎಲೈ! ಅರ್ಜುನನೇ, ವಿಷಮವಾದ ಈ ಯುದ್ಧದ ಸಂದರ್ಭದಲ್ಲಿ ನಿನಗೇಕೆ ಇಂತಹ ಮೋಹವು ಬಂದಿತು? ಇದು ಸ್ವರ್ಗಕ್ಕೂ ವಿರೋಧಿ. ಅಪಕೀರ್ತಿಯನ್ನೂ ತರುತ್ತದೆ. ನಪುಂಸಕರಂತೆ ಮಾತನಾಡಬೇಡ. ಇದು ನಿನಗೆ ಯೋಗ್ಯವಲ್ಲ. ನಿನ್ನ ಮನಸ್ಸಿನ ದೌರ್ಬಲ್ಯವನ್ನು ಪರಿತ್ಯಾಗ ಮಾಡಿ ಯುದ್ಧಕ್ಕೆ ಏಳು' ಎಂದು ಹೇಳಿದನು. ಇದಕ್ಕೆ ಪ್ರತಿಯಾಗಿ ಅರ್ಜುನರು, 'ಸ್ವಾಮಿ! ಪೂಜ್ಯರಾದ ಭೀಷ್ಮ, ದ್ರೋಣರಿಗೆ ನಾನು ಹೇಗೆ ಬಾಣವನ್ನು ಬಿಡಲಿ? ಪೂಜ್ಯರಾದ ಅವರ ರಕ್ತವನ್ನು ಚೆಲ್ಲಿ ಅದರಿಂದ ಪಡೆದ ರಾಜ್ಯವನ್ನು ನಾವು ಹೇಗೆ ಆಳುವುದು? ಯುದ್ಧ ಮಾಡಿದರೂ ಸಹ ನಾವು ಗೆಲ್ಲುತ್ತೇವೋ, ಸೋಲುತ್ತೇವೋ ಗೊತ್ತಿಲ್ಲ. ಯಾರನ್ನು ಕೊಂದು ನಾವು ಬದುಕಲು ಇಚ್ಛಿಸುವುದಿಲ್ಲವೋ ಅಂತಹ ದುರ್ಯೋಧನಾದಿಗಳು ಎದುರಾಗಿ ನಿಂತಿದ್ದಾರೆ. ಇಂತಹವರನ್ನು ಕೊಂದು ರಾಜ್ಯವನ್ನು ಸಂಪಾದಿಸುವುದಕ್ಕಿಂತ ಭಿಕ್ಷೆ ಬೇಡುವುದೇ ಲೇಸು. ಆದ್ದರಿಂದ ನನ್ನ ಬುದ್ಧಿಗೆ ಕಾರ್ಪಣ್ಯ ಬರುತ್ತಿದೆ. ನಾನು ನಿನ್ನ

ಶಿಷ್ಯನಾಗಿದ್ದೇನೆ. ನನಗೆ ಯಾವುದು ಶ್ರೇಯಸ್ಕರವೋ ನೀನೇ ಉಪದೇಶ ಮಾಡು' ಎಂದು ಪ್ರಾರ್ಥಿಸಿದರು. ಆಗ ಶ್ರೀಕೃಷ್ಣನು ಹೀಗೆ ಉಪದೇಶಿಸಿದನು.

'ಅರ್ಜುನ! ನೀನು ಯಾರನ್ನು ಕುರಿತು ಶೋಕಪಡುತ್ತಿದ್ದೀಯೋ ಅವರು ಶೋಕಾರ್ಹರಲ್ಲ. ನೀನು ಆಡುತ್ತಿರುವ ಮಾತುಗಳು ಜ್ಞಾನಿಗಳಿಗೆ ಸಮ್ಮತವಲ್ಲ. ನಿನ್ನ ಮನಸ್ಸಿಗೆ ಬಂದಂತೆ ನೀನು ಮಾತಾಡುತ್ತಿದ್ದಿ. ಏಕೆಂದರೆ ಪಂಡಿತರು ಜೀವಂತರನ್ನು ಕಂಡರೆ ಹೇಗೆ ದುಃಖ ಪಡುವುದಿಲ್ಲವೋ ಅದರಂತೆ ಮೃತರನ್ನೂ ಕಂಡು ದುಃಖ ಪಡುವುದಿಲ್ಲ. ಭೀಷ್ಮಾದಿಗಳು ಸಾಯುತ್ತಾರೆಂದು ನಿನ್ನ ದುಃಖವಷ್ಟೆ. ಜೀವನು ಸಾಯುತ್ತಾನೆ ಎಂದು ದುಃಖ ಪಡುತ್ತಿದ್ದೀಯೋ? ಅಥವಾ ದೇಹವು ಸಾಯುತ್ತದೆ ಎಂದು ದುಃಖ ಪಡುತ್ತಿದ್ದೀಯೋ? ಜೀವನು ಸಾಯುವುದೇ ಇಲ್ಲ. ಅವನು ಅಜ, ಅಮರ. ನಾನು ಹೇಗೆ ಅನಾದಿನಿತ್ಯನೋ ಹಾಗೆ ನೀನು, ಈ ಎಲ್ಲ ರಾಜರೂ ಸಹ ಅನಾದಿನಿತ್ಯರು. ನಮಗೆ ಬಾಲ್ಯ, ಕೌಮಾರ ಮೊದಲಾದ ಅವಸ್ಥೆಗಳ ಅನುಭವವು ಬರುತ್ತಿದೆ. ಈ ಅನುಭವವು ಜಡವಾದ ದೇಹಕ್ಕಾಗಲೀ, ಮನಸ್ಸಿಗಾಗಲೀ ಬರುವುದು ಸಾಧ್ಯವಿಲ್ಲ. ಆದ್ದರಿಂದ ದೇಹದಿಂದ ಭಿನ್ನನಾದ ಚೇತನನನ್ನು ಒಪ್ಪಲೇಬೇಕು. ಇಂತಹ ಚೇತನನಿಗೆ ದೇಹದ ಅವಸ್ಥೆಗಳು ಬದಲಾದಂತೆ ದೇಹವೂ ಬದಲಾಗುತ್ತವೆ. ಯುವಕನು ಮುದುಕನಾದಾಗ ದೃಢವಾದ ದೇಹವು ಹೋಗಿ ಜೀರ್ಣವಾದ ದೇಹವು ಬಂದರೂ ಸಹ ಯಾರೂ ಕೂಡ,' ನಮ್ಮ ತಂದೆಗೆ 60 ವರ್ಷ ಆಯಿತೆಂದು ಅಳುತ್ತಾ ಕೂಡುವುದಿಲ್ಲ. ಸಂಭ್ರಮದಿಂದ 60 ವರ್ಷದ ಶಾಂತಿಯನ್ನು ಮಾಡುತ್ತಾರೆ. ಹೀಗಿರುವಾಗ ಜೀರ್ಣವಾದ ಈ ದೇಹವು ಹೋಗಿ ನೂತನ ದೇಹವು ಬಂದಾಗವಿಕೆ ದುಃಖ ಪಡಬೇಕು. ಹಳೆಯ ಬಟ್ಟೆಯನ್ನು ಬಿಟ್ಟು ಹೊಸ ಬಟ್ಟೆಯನ್ನು ಉಟ್ಟುಕೊಂಡಂತೆ ಹಳೆಯ ದೇಹವನ್ನು ಬಿಟ್ಟು ಹೊಸದೇಹವನ್ನು ಪಡೆಯುತ್ತಾನೆ. ಅದಕ್ಕೇಕೆ ದುಃಖ ಪಡಬೇಕು? ಇಂದೋ ಇನ್ನಾವಗಲೋ ದೇಹವು ಹೋಗುವುದು ನಿಶ್ಚಯ. ಹುಟ್ಟಿದವನು ಸಾಯಲೇ ಬೇಕು. ಸತ್ತ ಮೇಲೆ ಹುಟ್ಟುವುದು ನಿಶ್ಚಯ. ಹೀಗೆ ಯಾವ ಸಾವನ್ನು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲವೋ ಆ ವಿಷಯದಲ್ಲಿ ದುಃಖ ಪಡುವುದು ವ್ಯರ್ಥ.

ಭೀಷ್ಮ, ದ್ರೋಣಾದಿಗಳು ಮೃತರಾದಾಗ ಅವರ ದರ್ಶನ, ಸ್ಪರ್ಶನಾದಿಗಳು ತಪ್ಪುತ್ತವೆ. ಅದರಿಂದ ದುಃಖ ಪಡುತ್ತೇನೆ ಎಂದರೆ ಅದೂ ಸರಿಯಲ್ಲ. ಏಕೆಂದರೆ ವಿಷಯಕ್ಕೂ ಇಂದ್ರಿಯಕ್ಕೂ ಸಂಬಂಧವಾಗುವ ಮಾತ್ರದಿಂದ ಸುಖ,ದುಃಖಗಳು ಉಂಟಾಗುವುದಿಲ್ಲ. ಮತ್ತೇನೆಂದರೆ ಅಭಿಮಾನವಿದ್ದಾಗ ಮಾತ್ರ ಸುಖ ದುಃಖಗಳು ಹುಟ್ಟುತ್ತವೆ. ಹೇಗೆಂದರೆ ಮೈಮರೆತು ನಿದ್ರೆ ಮಾಡುತ್ತಿದ್ದಾಗ ಮೈಮೇಲೆ ಹೂವಿನ ಹಾರ ಹಾಕಿದರೂ ಸುಖವಾಗುವುದಿಲ್ಲ. ಹಾವು ಹರಿದುಹೋದರೂ ದುಃಖವಾಗುವುದಿಲ್ಲ. ಅದೇ ಮೈಮ್ಯೆಲೆ ಎಚ್ಚರವಿದ್ದಾಹಗ ಹಾರ ಹಾಕಿದ ಸುಖ, ಹಾವು ಹರಿದ ದುಃಖ ಅನುಭವಕ್ಕೆ ಬರುತ್ತದೆ. ಆದ್ದರಿಂದ ಅಭಿಮಾನವು ಬಿಟ್ಟು ಯುದ್ಧ ಮಾಡು.

ಹೀಗೆ ಅಭಿಮಾನವನ್ನು ಬಿಟ್ಟು ಯುದ್ಧ ಮಾಡುವುದಿಕ್ಕಿಂತ ಯುದ್ಧವನ್ನೇ ಬಿಡಬಾರದೇ ಎನ್ನಬಾರದು. ಏಕೆಂದರೆ ಈ ಯುದ್ಧದಲ್ಲಿ ಅಲ್ಲದಿದ್ದರೂ ಮುಂದಾದರೂ ಮರಣ ಬರುವುದು ನಿಶ್ಚಯ. ಅಭಿಮಾನವು ಬಿಡದೇ ಇದ್ದಾಗ ಮುಂದಾದರೂ ಸಹ ಬಂಧುವಿಯೋಗದಿಂದ ದುಃಖವನ್ನು ಪಡಲೇಬೇಕಾಗುತ್ತದೆ. ಇಷ್ಟುಮಾತ್ರವಲ್ಲ; ಅಭಿಮಾನ ಬಿಡತಕ್ಕದ್ದು ಕ್ರಮೇಣ ಸಂಸಾರದಿಂದ ಮೋಕ್ಷಕ್ಕೂ ಕಾರಣವಾಗುತ್ತದೆ.

ಜೀವ-ಪರಮಾತ್ಮರಿಬ್ಬರೂ ಅನಾದಿನಿತ್ಯರಾಗಿದ್ದರೂ ಸಹ ಜೀವನು ಪರಮಾತ್ಮನ ಅಧೀನನಾಗಿದ್ದಾನೆ. ಪ್ರತಿಬಿಂಬವು ಹೇಗೆ ಬಿಂಬಕ್ಕೆ ಸದೃಶವಾಗಿರುತ್ತದೋ ಮತ್ತು ಅಧೀನವಾಗಿರುತ್ತದೋ ಅದರಂತೆ ಜೀವನು ಉಪರಮಾತ್ಮನಿಗೆ ಅನಾದಿನಿತ್ಯತ್ವದಿಂದ ಸದೃಶನಾಗಿ ಅಧೀನನೂ ಆಗಿದ್ದಾನೆ. ಆದ್ದರಿಂದ ಪರಮಾತ್ಮನನ್ನು ಬಿಂಬ ಎನ್ನುತ್ತಾರೆ. ಜೀವನನ್ನು ಪ್ರತಿಬಿಂಬ ಎನ್ನುತ್ತಾರೆ. ಪ್ರತಿಬಿಂಬದ ನಾಶವಾಗಬೇಕಾದರೆ ಮೂರು ರೀತಿ ಆಗಬಹುದು. ಒಂದು ಬಿಂಬನಾಶದಿಂದ.

ಎರಡು ಉಪಾಧಿನಾಶದಿಂದ. ಮೂರು ಬಿಂಬ-ಉಪಾಧಿಗಳ ಸನ್ನಿಧಿನಾಶದಿಂದ. ಹೇಗೆಂದರೆ- ಒಂದು ಕನ್ನಡಿಯ ಮುಂದೆ ಒಂದು ಮಡಕೆ ಇದೆ ಎಂದುಕೊಳ್ಳೋಣ. ಅದರ ಪ್ರತಿಬಿಂಬ ಕನ್ನಡಿಯಲ್ಲಿ ಬಿದ್ದಿದೆ. ಮಡಕೆ ಒಡೆದುಹೋದರೂ ಪ್ರತಿಬಿಂಬವು ನಾಶವಾಗುತ್ತದೆ. ಕನ್ನಡಿ ಒಡೆದು ಹೋದರೂ ಪ್ರತಿಬಿಂಬವು ನಾಶವಾಗುತ್ತದೆ. ಮಡಕೆಯನ್ನು ಪಕ್ಕಕ್ಕೆ ಸರಿಸಿದರೂ ಪ್ರತಿಬಿಂಬವು ನಾಶವಾಗುತ್ತದೆ. ಪ್ರಕೃತ ಬಿಂಬನಾದ ಪರಮಾತ್ಮನಿಗೆ ನಾಶವೇ ಇಲ್ಲ. ಅವನು ಸರ್ವತ್ರ ವ್ಯಾಪ್ತನಾದ್ದರಿಂದ ಪಕ್ಕಕ್ಕೆ ಸರಿಯುವ ಅವಕಾಶವೇ ಇಲ್ಲ. ಇಲ್ಲಿ ದೇಹವೇ ಕನ್ನಡಿಯಂತೆ. ಈ ಸ್ಥೂಲವಾದ ದೇಹವು ಹೋದರೂ ಸಹ ಸೂಕ್ಷ್ಮವಾದ ದೇಹವು ಇದ್ದೇ ಇರುತ್ತದೆ. ಆದ್ದರಿಂದ ಜೀವನಿಗೆ ಎಂದೂ ನಾಶವಿಲ್ಲ. ಸ್ವಾಭಾವಿಕವಾಗಿ ನಾಶ ಇಲ್ಲದಿದ್ದರೂ ಶಸ್ತ್ರಾಸ್ತ್ರಗಳಿಂದಲೋ, ಅಗ್ನಿಯಿಂದಲೋ ನೀರಿನಿಂದಲೋ ಜೀವನಿಗೆ ನಾಶವು ಏಕೆ ಬರಬಾರದು ಎನ್ನಬಾರದು? ಏಕೆಂದರೆ ಅವನನ್ನು ಶಸ್ತ್ರಾಸ್ತ್ರಗಳು ಕತ್ತರಿಸಲಾರವು. ಅಗ್ನಿಯು ಸುಡಲಾರದು. ನೀರು ಅವನನ್ನು ಒದ್ದೆ ಮಾಡಲಾರದು. ಗಾಳಿಯು ಒಣಗಿಸಲಾರದು. ಇದೂ ಸಹ ಜೀವನ ಸ್ವಂತಸಾಮರ್ಥ್ಯದಿಂದ ಅಲ್ಲ. ಮತ್ತೇನೆಂದರೆ ಒಳಗಿರುವ ಪರಮಾತ್ಮನ ಸಾಮರ್ಥ್ಯದಿಂದ. ಹೀಗೆ ಜೀವನು ಪರಮಾತ್ಮನಿಗೆ ಪ್ರತಿಬಿಂಬನಾದ್ದರಿಂದ ಬಿಂಬನಾದ ಪರಮಾತ್ಮನ ಪೂಜೆಯನ್ನು ಮಾಡಬೇಕು. ತನ್ನ ವರ್ಣ, ಆಶ್ರಮಕ್ಕೆ ಉಚಿತವಾದ ಕರ್ಮಾನುಷ್ಠಾನ ಮಾಡುವುದೇ ದೇವರ ಪೂಜೆ. ಆದ್ದರಿಂದಲೂ ನೀನು ಯುದ್ಧವನ್ನು ಮಾಡಲೇಬೇಕು.

ಯುದ್ಧವನ್ನು ಬಿಡುವುದರಿಂದ ಕರ್ತವ್ಯಲೋಪವಾಗುತ್ತದೆ. ಇದರಿಂದ ನರಕಾದ್ಯನರ್ಥವಾಗುತ್ತದೆ. ಶತ್ರುಗಳು, 'ಅರ್ಜುನನು ಕರುಣೆಯಿಂದ ಯುದ್ಧವನ್ನು ಬಿಟ್ಟ' ಎಂದು ತಿಳಿಯುವುದಿಲ್ಲ. ಹೇಡಿತನದಿಂದ ಹಿಮ್ಮೆಟ್ಟಿದ ಎಂದುಕೊಳ್ಳುತ್ತಾರೆ. ಸಂಭಾವಿತಪುರುಷನಿಗೆ ಅಪಕೀರ್ತಿಯು ಮರಣಕ್ಕಿಂತಲೂ ಹೆಚ್ಚು. ಆದ್ದರಿಂದಲೂ ಯುದ್ಧವನ್ನು ಮಾಡಬೇಡ.

ಇಂತಹ ಧರ್ಮಯುದ್ಧವು ಸುಖಕ್ಕೆ ಕಾರಣವಾದದ್ದು. ಸಿಗುವುದೇ ದುರ್ಲಭ. ಈ ಯುದ್ಧದಲ್ಲಿ ಸತ್ತರೂ ಸ್ವರ್ಗವಿದೆ. ಗೆದ್ದರೆ ರಾಜ್ಯವೂ ಸಿಗುತ್ತದೆ, ಸ್ವರ್ಗವೂ ಸಿಗುತ್ತದೆ. ಆದ್ದರಿಂದಲೂ ಯುದ್ಧವನ್ನು ಬಿಡುವುದು ಯೋಗ್ಯವಲ್ಲ.

ಜನಗಳು ತಾವು ಮನಸ್ಸಿಗೆ ಬಂದಂತೆ ಶ್ರೇಯಸ್ಸಿನ ಮಾರ್ಗವನ್ನು ಹೇಳುತ್ತಾರೆ. ಅವರು ಹೇಳುವ ಮಾತುಗಳು ಶಾಸ್ತ್ರವಿಚಾರಮಾಡಿ ನಿಶ್ಚಿತವಾದ್ದಲ್ಲ. ನಾನು ಹೇಳುವ ಸಾಧನೆಯ ಮಾರ್ಗವು ಶಾಸ್ತ್ರನಿಶ್ಚಿತವಾದದ್ದು. ಹೀಗಾಗಿ ಇದೊಂದೇ ಸರಿಯಾದದ್ದು.

ವೇದವನ್ನು ಒಪ್ಪುವ ಕೆಲವು ವಾದಿಗಳೂ ಸಹ ಸ್ವರ್ಗವೇ ಮಹಾಫಲ ಎಂದುಕೊಂಡಿದ್ದಾರೆ. ವೇದದಲ್ಲಿ ಮೇಲೆ ಮೇಲೆ ತೋರುವ ತಾತ್ಪರ್ಯದಿಂದ ಅವರು ಭ್ರಾಂತರಾಗಿದ್ದಾರೆ. ವಸ್ತುಸ್ಥಿತಿಯಲ್ಲಿ ಮೋಕ್ಷವೇ ಪರಮಪುರುಷಾರ್ಥ. ಆ ಮೋಕ್ಷವು ಭಗವಂತನ ಪ್ರಸಾದದಿಂದಾಗುತ್ತದೆ. ಭಗವಂತನ ಪ್ರಸಾದಕಾರಣವಾದದ್ದು ಭಗವಂತನ ಅಪರೋಕ್ಷಜ್ಞಾನ. ಈ ಅಪರೋಕ್ಷಜ್ಞಾನವು ಬರಬೇಕಾದರೆ ಅಂತಃಕರಣಶುದ್ಧಿ ಬೇಕು. ಅಂತಃಕರಣಶುದ್ಧಿಯಾಗುವುದು ಕರ್ಮಾನುಷ್ಠಾನದಿಂದ. ಆದ್ದರಿಂದಲೂ ಕ್ಷತ್ರಿಯನಿಗೆ ಉಚಿತವಾದ ಯುದ್ಧಾಖ್ಯಕರ್ಮವನ್ನು ನೀನು ಮಾಡಲೇ ಬೇಕು'.

ಹೀಗೆ ಅಪರೋಕ್ಷಜ್ಞಾನಿಯ ವಿಷಯವು ಪ್ರಸ್ತಾಪಕ್ಕೆ ಬಂದಾಗ ಅರ್ಜುನರು ಮತ್ತೆ ಪ್ರಶ್ನೆ ಮಾಡುತ್ತಾರೆ. ಅಪರೋಕ್ಷಜ್ಞಾನಿಯ ಲಕ್ಷಣವೇನು? ಅಪರೋಕ್ಷಜ್ಞಾನಿಯ ಪ್ರವೃತ್ತಿ ಹೇಗೆ ಇರುತ್ತದೆ? ಎಂದು.

ಈ ಎರಡು ಪ್ರಶ್ನೆಗಳಿಗೆ ಕ್ರಮವಾಗಿ ಶ್ರೀಕೃಷ್ಣನು ಉತ್ತರಿಸುತ್ತಾನೆ. 'ಜಿತೇಂದ್ರಿಯನಾಗಿದ್ದು ಸುಖ,ದುಃಖಗಳು ಬಂದಾಗ ಪ್ರಾಯಃ ಹಿಗ್ಗು-ಕುಗ್ಗು ಯಾರಿಗೆ ಇಲ್ಲವೋ ಅವನೇ ಅಪರೋಕ್ಷಜ್ಞಾನಿ. ಆಮೆಯು ಹೇಗೆ ತನ್ನ ಅಂಗಗಳನನ್ನು ಆಯಾಸವಿಲ್ಲದೇ ತನ್ನೊಳಗೆ ಅಡಗಿಸಿಕೊಳ್ಳುತ್ತದೋ ಹಾಗೆ ವಿಷಯಗಳಿಂದ ಇಂದ್ರಿಯಗಳನ್ನು ಯಾರು ಸ್ವಾಭಾವಿಕವಾಗಿ

ಹಿಂದಕ್ಕೆ ಎಳೆದುಕೊಂಡಿದ್ದಾರೋ ಅವನನ್ನು ಅಪರೋಕ್ಷಜ್ಞಾನಿ ಎನ್ನುತ್ತಾರೆ. ಇಂತಹ ಜ್ಞಾನಿಯು ಕಾಮ, ಕ್ರೋಧ, ಭಯಗಳನ್ನು ಬಿಟ್ಟಿರುತ್ತಾನೆ.

ಅಪರೋಕ್ಷಜ್ಞಾನಿಗೆ ಯಾವುದನ್ನು ಲಕ್ಷಣ ಎಂದು ಹೇಳುತ್ತೇವೋ ಅದೇ ಅಪರೋಕ್ಷಜ್ಞಾನಸಾಧಕನಿಗೆ ಸಾಧನೆಯೂ ಆಗುತ್ತದೆ. ಹೇಗೆಂದರೆ- ಜಿತೇಂದ್ರಿಯತ್ವವು ಅಪರೋಕ್ಷಜ್ಞಾನಿಯ ಲಕ್ಷಣ ಎಂದು ಹೇಳಿದೆ. ಅಪರೋಕ್ಷಜ್ಞಾನವನ್ನು ಪಡೆಯಬೇಕಾದರೆ ಆ ಸಾಧಕನು ಜಿತೇಂದ್ರಿಯನಾಗಿರಬೇಕು. ವ್ಯತ್ಯಾಸವೇನೆಂದರೆ ಅಪರೋಕ್ಷಜ್ಞಾನಿಯು ಸ್ವಾಭಾವಿಕವಾಗಿ ಜಿತೇಂದ್ರಿಯನಾಗಿರುತ್ತಾನೆ. ಸಾಧಕನು ಪ್ರಯತ್ನಪೂರ್ವಕವಾಗಿ ಇಂದ್ರಿಯಗಳನ್ನು ವಶ ಮಾಡಿಕೊಳ್ಳಬೇಕು.

ಇಂದ್ರಿಯಗಳ ಸ್ವಭಾವವೇ ವಿಷಯಗಳ ಹಿಂದೆ ಓಡತಕ್ಕದ್ದು. ಹಾಗೆ ಓಡುವಾಗ ಇಂದ್ರಿಯಗಳು ಮನಸ್ಸನ್ನು ಬಲಾತ್ಕಾರವಾಗಿ ಸೆಳೆದುಕೊಂಡು ಹೋಗುತ್ತವೆ. ವಿಷಯಸಂಯೋಗವಾದಾಗ ಇಂದ್ರಿಯವು ಚಂಚಲವಾಗುತ್ತದೆ. ಆದ್ದರಿಂದ ಇಂದ್ರಿಯಗಳಿಗೆ ವಿಷಯಗಳ ಸಂಬಂಧವನ್ನೇ ತಪ್ಪಿಸುವುದು ಲೇಸು. ಆನೆಯನ್ನು ಉಪವಾಸಕೆಡವಿ ಪಳಗಿಸುವಂತೆ ಇಂದ್ರಿಯಗಳಿಗೆ ವಿಷಯಗಳನ್ನು ಕೊಡದೇ ಪಳಗಿಸಬೇಕು. ಇಂದ್ರಿಯನಿಗ್ರಹದಿಂದ ಭಗವದಪರೋಕ್ಷ ಎಂಬ ಮಹಾಫಲ ಇರುವಾಗ ಎಲ್ಲರೂ ಏತಕ್ಕೆ ಇಂದ್ರಿಯನಿಗ್ರಹ ಮಾಡುತ್ತಿಲ್ಲ ಎಂದರೆ ಇಂದ್ರಿಯನಿಗ್ರಹವು ಕಷ್ಟಸಾಧ್ಯ. ಇಂದ್ರಿಯಜಯವನ್ನು ಸಂಪಾದಿಸಲು ಇಚ್ಛಿಸುವವರು ಉಪವಾಸ ಮಾಡಬೇಕಾಗುತ್ತದೆ. ಉಪವಾಸ ಮಾಡಿದಾಗ ಇಂದ್ರಿಯಗಳ ಶಕ್ತಿ ಕುಗ್ಗುತ್ತದೆ. ಇದರಿಂದ ತಾತ್ಕಾಲಿಕವಾಗಿ ವಿಷಯಗಳು ಬೇಡ ಎನಿಸುತ್ತದೆ. ಹೀಗೆ ಇಂದ್ರಿಯಗಳಿಗೂ ವಿಷಯಗಳಿಗೂ ಸಂಬಂಧವನ್ನು ತಪ್ಪಿಸಿಕೊಳ್ಳಬಹುದು. ಉಪವಾಸದಿಂದ ಬೇರೆ ಇಂದ್ರಿಯಗಳ ಹತೋಟಿ ಬಂದರೂ ನಾಲಿಗೆಯ ಮೇಲೆ ಬರುವುದಿಲ್ಲ. ನಾಲಿಗೆಗೆ ಮಾತ್ರ ತಿನ್ನಬೇಕೆಂಬ ಆಸೆ ಮತ್ತಷ್ಟು ಹೆಚ್ಚುತ್ತದೆ. ಈ ನಾಲಿಗೆಯೂ ಸಹ ಸ್ವಾಧೀನವಾಗುವುದು ಭಗವಂತನನ್ನು ಕಂಡ ಮೇಲೆ. ಮತ್ತೇನೆಂದರೆ ಉಪವಾಸದಿಂದ ಇಂದ್ರಿಯಗಳ ವಿಷಯಾನುಭವಶಕ್ತಿ ಕುಗ್ಗುತ್ತದೇ ಹೊರತಾಗಿ ವಿಷಯಾನುಭವದ ಇಚ್ಛೆ ಹೋಗುವುದಿಲ್ಲ. ಆ ಇಚ್ಛೆಯೂ ಹೋಗಬೇಕಾಗದರೆ ಭಗವಂತನ ದರ್ಶನದಿಂದಲೇ ಸಾಧ್ಯ.

ವಿಷಯಗಳನ್ನು ಚಿಂತನೆ ಮಾಡುತ್ತಿದ್ದರೆ ಅವುಗಳಲ್ಲಿ ಸಂಗವು ಉಂಟಾಗುತ್ತದೆ. ಸಂಗವೇ ಹೆಚ್ಚಿದಾಗ ಅದನ್ನು ಕಾಮ ಎನ್ನುತ್ತಾರೆ. ಆ ಕಾಮಕ್ಕೆ ಯಾರಾದರೂ ಅಡ್ಡಿ ಬಂದರೆ ಅವರ ಮೇಲೆ ಕ್ರೋಧ ಬರುತ್ತದೆ. ಕ್ರೋಧದಿಂದ ಮೋಹವು ಹುಟ್ಟುತ್ತದೆ. ಮೋಹದಿಂದಾಗಿ ತಾನು ಹಿಂದೆ ತಿಳಿದಿದ್ದ ಶಾಸ್ತ್ರಾರ್ಥವು ಮರೆಯುತ್ತದೆ. ಇದರಿಂದ ಕಾರ್ಯಾಕಾರ್ಯವಿವೇಕ ಬುದ್ಧಿಯು ಹೋಗಿಬಿಡುತ್ತದೆ. ಆಗ ಮಾಡಬಾರದ್ದನ್ನು ಮಾಡಿ ನರಕಾದಿಅನರ್ಥಕ್ಕೆ ಒಳಗಾಗುತ್ತಾನೆ. ಇಷ್ಟು ಅನರ್ಥಕ್ಕೆ ಕಾರಣವಾದ್ದರಿಂದ ವಿಷಯಚಿಂತನೆಯನ್ನೇ ಬಿಡಬೇಕು.

ಅಪರೋಕ್ಷಜ್ಞಾನಿಯ ಪ್ರವೃತ್ತಿಯು ಮತ್ತನ ಪ್ರವೃತ್ತಿಯಂತೆ ಇರುತ್ತದೆ. ಎಂದರೆ ಜ್ಞಾನಿಯು ನೋಡಿ,ಕೇಳಿ, ಮುಟ್ಟಿ, ಮೂಸಿ, ಓಡಾಡಿ, ಮಾತನಾಡಿ ಉಳಿದವರಂತೆ ವ್ಯಾಪಾರ ಮಾಡುವಂತೆ ಕಂಡರೂ ಆತನಿಗೆ ಆಕಡೆ ಅನುಸಂಧಾನವಿರುವುದಿಲ್ಲ. ಭಗವಂತನ ಕಡೆಯೇ ದೃಷ್ಟಿ ಇದ್ದು ಜಗತ್ತಿನ ಕಡೆ ಸ್ವಲ್ಪಮಾತ್ರ ಎಚ್ಚರವಿರುತ್ತದೆ. ಅಜ್ಞಾನಿಗಳು ಜಗತ್ತಿನ ವಿಷಯದಲ್ಲಿ ಎಚ್ಚರವಿದ್ದು ದೇವರ ವಿಷಯದಲ್ಲಿ ನಿದ್ದೆ ಮಾಡುತ್ತಿದ್ದರೆ ಜ್ಞಾನಿಯು ದೇವರ ವಿಷಯದಲ್ಲಿ ಎಚ್ಚರವಿದ್ದು ಜಗತ್ತಿನ ವಿಷಯದಲ್ಲಿ ನಿದ್ದೆ ಮಾಡುತ್ತಿರುತ್ತಾನೆ.

ಜ್ಞಾನಿಯ ವಿಷಯಭೋಗಕ್ಕೆ ಸಮುದ್ರದ ದೃಷ್ಟಾಂತ ಕೊಡಬಹುದು. ಸಮುದ್ರವು ನದಿಗಳ ನೀರು ತನಗೆ ಬರಲಿ ಎಂದು ಪ್ರಯತ್ನ ಮಾಡುವುದಿಲ್ಲ. ಮಳೆಗಾಲದಲ್ಲಿ ನೀರು ಹೆಚ್ಚಾಗಿ ಬಂದು ಸೇರಿದಾಗ ಉಕ್ಕುವುದಿಲ್ಲ. ಬೇಸಿಗೆಯಲ್ಲಿ ನದಿಯ ನೀರು ಕಡಿಮೆಯಾದಾಗ ತಗ್ಗುವುದೂ ಇಲ್ಲ. ಅದರಂತೆ ಜ್ಞಾನಿಯು ವಿಷಯವು ದೊರೆಯಲಿ ಎಂದು ಪ್ರಯತ್ನ

ಮಾಡುವುದೂ ಇಲ್ಲ. ವಿಷಯವು ಸಿಕ್ಕಿತು ಎಂದು ಹಿಗ್ಗುವುದೂ ಇಲ್ಲ. ವಿಷಯವು ಸಿಗಲಿಲ್ಲ ಎಂದು ಕುಗ್ಗುವುದೂ ಇಲ್ಲ.

ಎಲೈ! ಅರ್ಜುನನೇ, ಇದಕ್ಕೆ ಬ್ರಾಹ್ಮೀಸ್ಥಿತಿ ಎಂದು ಕೂಗುತ್ತಾರೆ. ದೇಹವನ್ನು ಬಿಡುವ ಕಾಲದಲ್ಲಿಯೂ ಈ ಸ್ಥಿತಿಯಲ್ಲಿದ್ದರೆ ಅಂತಹವನು ಪರಬ್ರಹ್ಮನನ್ನು ಹೊಂದುತ್ತಾನೆ'.

ಹೀಗೆ ಎರಡನೆಯ ಅಧ್ಯಾಯದಲ್ಲಿ ಜೀವ-ಬ್ರಹ್ಮರ ವಿಚಾರವನ್ನು ತಿಳಿಸಿ ಜೀವನು ಸ್ವವರ್ಣಾಶ್ರಮೋಚಿತ ಕರ್ಮಾನುಷ್ಠಾನ ರೂಪವಾದ ಬ್ರಹ್ಮನ ಪೂಜೆಯನ್ನು ಮಾಡಬೇಕೆಂದೂ, ಈ ಪೂಜೆಯು ಬ್ರಹ್ಮಜ್ಞಾನಕ್ಕೆ ಸಾಧಕವೆಂದೂ ತಿಳಿಸಿ ಬ್ರಹ್ಮಜ್ಞಾನಿಯ ಲಕ್ಷಣ, ಪ್ರವೃತ್ತಿಗಳನ್ನು ವರ್ಣಿಸಲಾಗಿದೆ.

## ತೃತೀಯಾಧ್ಯಾಯಸಾರ

ಎರಡನೆಯ ಅಧ್ಯಾಯದಲ್ಲಿ ಹೇಳಿದ ಬ್ರಹ್ಮಜ್ಞಾನಕ್ಕೆ ಎರಡುವಿಧವಾದ ಸಾಧನಗಳಿವೆ. ಕರ್ಮಯೋಗ ಎಂಬುವುದು ಬಹಿರಂಗ ಸಾಧನ. ಧ್ಯಾನಯೋಗ ಎಂಬುವುದು ಅಂತರಂಗಸಾಧನ. ಕರ್ಮಯೋಗವನ್ನು ತಿಳಿಸಲು ಮೂರನೆಯ ಅಧ್ಯಾಯ ಹೊರಟಿದೆ.

ಆರಂಭದಲ್ಲಿ ಅರ್ಜುನರು ಶ್ರೀಕೃಷ್ಣನನ್ನು ಹೀಗೆ ಪ್ರಶ್ನೆ ಮಾಡುತ್ತಾರೆ. 'ಕೇಶವ! ಕರ್ಮಕ್ಕಿಂತಲೂ ಧ್ಯಾನವು ಶ್ರೇಷ್ಠವೆಂದು ನೀನೇ ಹೇಳಿದ್ದೀಯೆ. ಹೀಗಿರುವಾಗ ಜ್ಞಾನಮಾರ್ಗವನ್ನು ಆಶ್ರಯಿಸು ಎಂದು ಉಪದೇಶ ಮಾಡುವುದು ಬಿಟ್ಟು ಕರ್ಮವನ್ನು ಮಾಡೆಂದು ಏಕೆ ಉಪದೇಶ ಮಾಡುತ್ತಿದ್ದೀಯೆ? ಅದರಲ್ಲೂ ಯುದ್ಧವೆಂಬ ಘೋರಕರ್ಮದಲ್ಲಿ ಏಕೆ ಪ್ರೇರಿಸುತ್ತಿದ್ದೀಯೆ?'

ಇದಕ್ಕೆ ಶ್ರೀಕೃಷ್ಣನು ಉತ್ತರಕೊಡುವ ಕ್ರಮ ಹೀಗಿದೆ. 'ಜ್ಞಾನ, ಕರ್ಮ ಇವೆರಡೂ ಶ್ರೇಯಸ್ಸನ್ನು ಪಡೆಯಲು ಅತಿಭಿನ್ನವಾದ ಮಾರ್ಗಗಳಲ್ಲ. ಕರ್ಮಯೋಗಿಗೆ ಜ್ಞಾನವೂ ಬೇಕು. ಜ್ಞಾನಯೋಗಿಗೆ ಕರ್ಮವೂ ಬೇಕು. ಜ್ಞಾನಯೋಗಿಗಳಾದ ಸನಕಾದಿಗಳು ಹೆಚ್ಚಿಗೆ ಜ್ಞಾನದಲ್ಲಿ ಆಸಕ್ತರಾಗಿ ಸ್ವಲ್ಪಕರ್ಮದಿಂದ ಶ್ರೇಯಸ್ಸನ್ನು ಪಡೆದರೆ, ಕರ್ಮಯೋಗಿಗಳಾದ ಜನಕಾದಿಗಳು ತಮ್ಮ ಜ್ಞಾನಕ್ಕಿಂತ ಪ್ರಚುರವಾದ ಕರ್ಮವನ್ನು ಮಾಡಿಕೊಂಡು ಶ್ರೇಯಸ್ಸನ್ನು ಪಡೆದಿದ್ದಾರೆ.

ದೇವತೆಗಳು, ಯತಿಗಳು ಇವರೆಲ್ಲ ಜ್ಞಾನಯೋಗಿಗಳು. ಚಕ್ರವರ್ತಿಗಳು, ಗೃಹಸ್ಥರು ಇವರೆಲ್ಲ ಕರ್ಮಯೋಗಿಗಳು. ಆದ್ದರಿಂದ ಅವರು ಚೆನ್ನಾಗಿ ಕರ್ಮಾನುಷ್ಠಾನವನ್ನು ಮಾಡಿಕೊಂಡೇ ಜ್ಞಾನದ್ವಾರಾ ಶ್ರೇಯಸ್ಸನ್ನು ಪಡೆಯಬೇಕು. ಅಂದರೆ ಕರ್ಮವನ್ನು ಚೆನ್ನಾಗಿ ಮಾಡದೇ ಇದ್ದಾಗ ಅಂತಃಕರಣಶುದ್ಧಿಯೇ ಆಗುವುದಿಲ್ಲ. ಅಂತಃಕರಣಶುದ್ಧಿ ಇಲ್ಲದೇ ಜ್ಞಾನವನ್ನು ಸಂಪಾದಿಸುತ್ತೇವೆ ಎಂಬುದು ಎಷ್ಟು ಓದಿ, ಬರೆದು ಮಾಡಿದರೂ ಅದು ಫಲಿಸುವುದಿಲ್ಲ. ಪುಸ್ತಕದ ತಿಳುವಳಿಕೆ ಬಂದಾಗ್ಯೂ ಅದು ತತ್ತ್ವಜ್ಞಾನಕ್ಕೆ ಕಾರಣವಾಗುವುದಿಲ್ಲ. ಅಶುದ್ಧವಾದ ಪಾತ್ರೆಗೆ ಹಾಲು ಹಾಕಿಸಿಕೊಂಡರೆ ಹೇಗೆ ವ್ಯರ್ಥವೋ ಹಾಗೆ ಅಶುದ್ಧವಾದ ಮನಸ್ಸಿನಲ್ಲಿ ಜ್ಞಾನವನ್ನು ತುಂಬಿಕೊಳ್ಳಲು ಪ್ರಯತ್ನಪಟ್ಟರೂ ವ್ಯರ್ಥವಾಗುತ್ತದೆ. ನೀನೂ ಸಹ ಅಧಿಕಾರಿಕಜೀವ. ಕ್ಷತ್ರಿಯಕುಲದಲ್ಲಿ ಹುಟ್ಟಿದ್ದೀಯೆ. ಆದ್ದರಿಂದ ಪ್ರಿಯವ್ರತಮಹಾರಾಜರು ಸನ್ಯಾಸವನ್ನು ತೆಗೆದುಕೊಳ್ಳಲು ಇಚ್ಛಿಸಿದರೂ ಕೂಡ ಬ್ರಹ್ಮದೇವರ ಉಪದೇಶದಂತೆ ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಹೇಗೆ ಕರ್ಮಾಚರಣೆ ಮಾಡಿದರೋ ಅದರಂತೆ ನೀನೂ ಸಹ ಯುದ್ಧರೂಪ ಕರ್ಮಾಚರಣೆ ಮಾಡಲು ಅಧಿಕಾರಿಯಾಗಿದ್ದೀಯೆ. ಅದನ್ನು ಬಿಟ್ಟು ಸನ್ಯಾಸಿಯಂತೆ ಭಿಕ್ಷೆ ಬೇಡಿ ಜೀವಿಸುವುದು ಯೋಗ್ಯವಲ್ಲ.

ಕರ್ಮವು ಬಂಧಕ. ವಿದ್ಯೆಯು ಮೋಚಕ. ಹೀಗಿದ್ದರೂ ಕರ್ಮ ಮಾತ್ರವೇ ಬಂಧಕವಲ್ಲ. ಕಾಮ್ಯಕರ್ಮವು ಬಂಧಕ. ಆದ್ದರಿಂದ ಭಗವಂತನ ಪ್ರೀತಿಗೋಸ್ಕರ ನಿತ್ಯ, ನೈಮಿತ್ತಿಕಕರ್ಮಗಳನ್ನು ಮಾಡಲೇಬೇಕು. ಕರ್ಮೇಂದ್ರಿಯಗಳನ್ನು

ನಿಗ್ರಹಿಸಿ ಮನಸ್ಸಿನಿಂದ ವಿಷಯವನ್ನು ಚಿಂತನೆ ಮಾಡುತ್ತಿದ್ದರೆ ಅವನನ್ನು ಮಿಥ್ಯಾಚಾರಿ ಎನ್ನುತ್ತಾರೆ. ಇದಕ್ಕೆ ವ್ಯತಿರಿಕ್ತವಾಗಿ ಫಲದ ಅಪೇಕ್ಷೆಯನ್ನು ಬಿಟ್ಟು ಸ್ವೋಚಿತಕರ್ಮಗಳನ್ನು ಆಚರಿಸುತ್ತಿದ್ದರೆ ಅವನನ್ನು ಯೋಗಿ ಎನ್ನುತ್ತಾರೆ. ಅಜ್ಞಾನಿಗಳು ಫಲಾಸಕ್ತಿಯಿಂದ ಕರ್ಮವನ್ನು ಮಾಡಿದರೆ, ಜ್ಞಾನಿಯು ಫಲಾಸಕ್ತಿಯನ್ನು ಬಿಟ್ಟು ಕರ್ಮವನ್ನು ಮಾಡುತ್ತಾನೆ. ಇದರಿಂದ ಲೋಕಸಂಗ್ರಹವೂ ಆಗುತ್ತದೆ. ಹೇಗೆಂದರೆ ಲೋಕದಲ್ಲಿ ದೊಡ್ಡವರು ಮಾಡಿದಂತೆ ಚಿಕ್ಕವರು ಮಾಡುತ್ತಾರೆ. ಅವರು ಯಾವುದನ್ನು ಪ್ರಮಾಣವೆಂದು ಹೇಳುತ್ತಾರೋ ಅದನ್ನು ಅನುಸರಿಸುತ್ತಾರೆ. ಅರ್ಜುನ! ನನಗೇನೂ ಬರಬೇಕಾದ್ದಿಲ್ಲ. ಬಾರದೇ ಇದ್ದದ್ದೂ ಇಲ್ಲ. ಆದರೂ ನಾನು ಕರ್ಮವನ್ನು ಮಾಡುತ್ತೇನೆ. ಏಕೆಂದರೆ, ಹೀಗೆ ಮಾಡಬೇಕೆಂದು ತೋರಿಸುವುದಕ್ಕೋಸ್ಕರ. ನಾನು ಕರ್ಮವನ್ನು ಮಾಡದೇ ಬಿಟ್ಟರೆ ಅದನ್ನು ನೋಡಿದ ಜನಗಳು ತಾವೂ ಬಿಟ್ಟಾರು. ವರ್ಣಾಶ್ರಮೋಚಿತಕರ್ಮಗಳು ನಡೆಯದೇ ಇದ್ದಾಗ ವರ್ಣಸಾಂಕರ್ಯ ಉಂಟಾಗುತ್ತದೆ. ಇದರಿಂದ ಪ್ರಜೆಗಳನ್ನು ಕೊಂದಂತೆ ಆಗುತ್ತದೆ.

ಹಿಂದೆ ಬ್ರಹ್ಮದೇವರು ಪ್ರಜೆಗಳನ್ನೂ, ಯಜ್ಞಗಳನ್ನೂ ಸೃಷ್ಟಿಸಿದರು. ಪ್ರಜೆಗಳಿಗೆ ಹೀಗೆ ಅಪ್ಪಣೆ ಮಾಡಿದರು.'ನೀವು ದೇವತೆಗಳನ್ನು ಕುರಿತು ಯಜ್ಞವನ್ನು ಮಾಡಿರಿ. ಇದಕ್ಕೆ ಪ್ರತಿಯಾಗಿ ದೇವತೆಗಳು ನಿಮಗೆ ಇಷ್ಟಾರ್ಥವನ್ನು ಕೊಡುತ್ತಾರೆ. ಹೀಗೆ ಪರಸ್ಪರ ನೀವೂ, ದೇವತೆಗಳೂ ಸಂಭಾವನೆ ಮಾಡಿಕೊಳ್ಳಿರಿ. ಇದರಿಂದ ಶ್ರೇಯಸ್ಸಾಗುತ್ತದೆ. ಆ ದೇವತೆಗಳು ಕೊಟ್ಟ ಬೆಳೆಯನ್ನು ಅವರಿಗೆ ಒಂದು ಭಾಗ ಕೊಡದೇ ಹಾಗೇ ಉಪಯೋಗಿಸಿದರೆ ಅವರು ಕಳ್ಳರಂತೆ ಶಿಕ್ಷೆಗೆ ಅರ್ಹರು. ಯಜ್ಞವನ್ನು ಮಾಡಿ ಉಳಿದಿದ್ದನ್ನು ಭೋಜನ ಮಾಡುವವರು ಭಗವಂತನನ್ನು ಹೊಂದುತ್ತಾರೆ'. ಈ ಬ್ರಹ್ಮದೇವರ ಮಾತಿನಲ್ಲಿ ಕರ್ಮ ಮಾಡದೇ ಇರುವವರನ್ನು ನಿಂದಿಸಿದ್ದರಿಂದ, ಮತ್ತು ಕರ್ಮಮಾಡುವವರನ್ನು ಪ್ರಶಂಸೆ ಮಾಡಿದ್ದರಿಂದ ಕರ್ಮವನ್ನು ಮಾಡಲೇ ಬೇಕು ಎಂದು ಗೊತ್ತಾಗುತ್ತದೆ.

ಮತ್ತೇನೆಂದರೆ ಕರ್ಮವನ್ನು ಮಾಡದೇ ಇದ್ದರೆ ವಿಶ್ವಚಕ್ರವನ್ನು ಏರುಪೇರು ಮಾಡಿದಂತೆ ಆಗುತ್ತದೆ. ಹೇಗೆಂದರೆ, ಎಲ್ಲರೂ ಬದುಕುವುದು ಅನ್ನದಿಂದ. ಅನ್ನವು ಸಿಗತಕ್ಕದ್ದು ಮೇಘಕ್ಕೆ ಅಭಿಮಾನಿಯಾದ ಪರ್ಜನ್ಯನಿಂದ. ಪರ್ಜನ್ಯನು ಸಂತೋಷಗೊಂಡು ಮಳೆಗರೆಯುವುದು ಯಜ್ಞದಿಂದ. ಯಜ್ಞವು ಹುಟ್ಟುವುದು ಕರ್ಮಾಚರಣೆಯಿಂದ. ಆ ಕರ್ಮಕ್ಕೆ ಪ್ರೇರಕನು ಭಗವಂತ. ಆ ಭಗವಂತನು ಸಂತುಷ್ಟನಾಗಿ ಸತ್ಕರ್ಮವನ್ನು ಪ್ರೇರಿಸುವುದು ವೇದಗಳಿಂದ ಭಗವನಂತನನ್ನು ಕೊಂಡಾಡುವುದರಿಂದ. ವೇದಗಳಿಂದ ಸ್ತೋತ್ರ ಮಾಡಬೇಕಾದರೆ ಪ್ರಜೆಗಳು ಬದುಕಿರಬೇಕು. ಇದು ವಿಶ್ವಚಕ್ರ. ಈ ವಿಶ್ವಚಕ್ರದಲ್ಲಿ ಸೇರಿದ ಕರ್ಮವು ಲೋಪವಾದರೆ ಯಜ್ಞವು ನಡೆಯುವ ಹಾಗಿಲ್ಲ. ಯಜ್ಞಗಳು ನಡೆಯದೇ ಇದ್ದರೆ ಪರ್ಜನ್ಯನು ಸಂತುಷ್ಟನಾಗಿ ಮಳೆ ಕೊಡುವುದಿಲ್ಲ. ಮಳೆ,ಬೆಳೆ ಆಗದಿದ್ದರೆ ಪ್ರಜೆಗಳು ಬದುಕುವಂತಿಲ್ಲ. ಅವರು ಬದುಕದಿದ್ದರೆ ವೇದಗಳನ್ನು ಉಚ್ಚರಿಸುವಂತಿಲ್ಲ. ವೇದೋಚ್ಚಾರಣೆ ಮಾಡದಿದ್ದರೆ ಭಗವಂತನು ಸಂತೋಷ ಪಡುವಂತಿಲ್ಲ. ಭಗವಂತನು ಸಂತೋಷಪಡದಿದ್ದರೆ ಸತ್ಕರ್ಮವನ್ನು ಪ್ರೇರಿಸುವುದಿಲ್ಲ. ಹೀಗೆ ಕರ್ಮಲೋಪದಿಂದ ಇಡೀ ವಿಶ್ವಚಕ್ರವೇ ಏರುಪೇರಾಗುತ್ತದೆ. ಆದ್ದರಿಂದ ಅವಶ್ಯವಾಗಿ ಕರ್ಮ ಮಾಡಬೇಕು.

ಯಾರೂ ಸಹ ಒಂದು ಕ್ಷಣವೂ ಸಹ ಕರ್ಮವನ್ನು ಮಾಡದೇ ಇರುವುದು ಸಾಧ್ಯವಿಲ್ಲ. ದೇಹದಿಂದಲೋ, ಮಾತಿನಿಂದಲೋ ಮನಸ್ಸಿಂದಲೋ ಏನಾದರೂ ಒಂದುಕರ್ಮವನ್ನು ಮಾಡುತ್ತಲೇ ಇರುತ್ತಾನೆ. ಯುದ್ಧವೆಂಬ ಕರ್ಮವನ್ನು ಬಿಟ್ಟು ಬೇರೇನು ಮಾಡಿದರೂ ಸಹ ಅದೂ ಒಂದು ಕರ್ಮವೇ ಆಗುತ್ತದೆ. ಇದರಿಂದ ಆಗಿದ್ದೇನೆಂದರೆ ಸ್ವಕರ್ಮವನ್ನು ಬಿಟ್ಟಂತಾಯಿತು. ಸ್ವಧರ್ಮಾಚರಣೆ ಮಾಡುವಾಗ ಸಾಂಗವಾಗಿ ಮಾಡಲು ಆಗದೇ ಇದ್ದರೂ ಸಹ ಅದೇ ಶ್ರೇಷ್ಠ. ಪರಧರ್ಮವು ಸಾಂಗವಾಗಿ ಮಾಡಿದರೂ ಸಹ ಅದೇ ಕನಿಷ್ಠ. ಸ್ವಧರ್ಮಾಚರಣೆಯಲ್ಲಿ ಮರಣ ಬಂದರೂ

ಶ್ರೇಯಸ್ಸು. ಪರಧರ್ಮವು ನರಕಾದಿಭಯವನ್ನು ಉಂಟುಮಾಡತಕ್ಕದ್ದು. ಆದ್ದರಿಂದ ಸ್ವಧರ್ಮರೂಪವಾದ ಯುದ್ಧವನ್ನು ನೀನು ಮಾಡಬೇಕು'.

ಈ ಕೃಷ್ಣನ ಉಪದೇಶವನ್ನು ಕೇಳಿದ ಅರ್ಜುನರು ಕರ್ಮಕ್ಕೆ ಪ್ರೇರಕರು ಭಗವಂತ ಮತ್ತು ತತ್ವೇಶರು ಎಂದು ತಿಳಿದಿದ್ದರೂ ಸಹ ಅವರ ನಂತರ ಕರ್ಮಕ್ಕೆ ಯಾರು ಪ್ರೇರಕರು? ಎಂದು ತಿಳಿಯಲು ಪ್ರಶ್ನಿಸುತ್ತಾರೆ. 'ಸ್ವಾಮಿ! ಕೃಷ್ಣ ಇದು ಕೆಟ್ಟದ್ದು ಎಂದು ತಿಳಿದಿದ್ದರೂ ಸಹ ಬಲಾತ್ಕಾರಕ್ಕೆ ಸಿಕ್ಕಿದಂತೆ ದುಷ್ಕರ್ಮವನ್ನು ಮಾಡುತ್ತಿರುತ್ತೇವೆ. ಇದಕ್ಕೇನು ಕಾರಣ' ಎಂಬುದಾಗಿ.

ಇದಕ್ಕೆ ಕೃಷ್ಣನು ಹೀಗೆ ಉತ್ತರಿಸುತ್ತಾನೆ. 'ಕರ್ಮಕ್ಕೆ ಪ್ರೇರಕವಾದದ್ದು ಕಾಮ. ಈ ಕಾಮದಿಂದಲೇ ಕ್ರೋಧವೂ ಸಹ ಹುಟ್ಟತಕ್ಕದ್ದು. ಕಾಮವು ಹುಟ್ಟತಕ್ಕದ್ದು ರಜೋಗುಣದಿಂದ. ಕೇವಲ ಜಡವಾದ ಕಾಮವು ದುಷ್ಕರ್ಮಕ್ಕೆ ಪ್ರೇರಕವಲ್ಲ. ಮತ್ತೇನೆಂದರೆ ಕಾಮಕ್ಕೆ ಅಭಿಮಾನಿಯಾದ ಕಾಲನೇಮಿ ಎಂಬ ದೈತ್ಯನಿದ್ದಾನೆ. ಇಂತಹ ದೈತ್ಯನ ಪ್ರೇರಣೆಯಿಂದ ದುಷ್ಕರ್ಮಗಳು ನಡೆಯುತ್ತವೆ. ಅದನ್ನು ಮೀರಬೇಕಾದರೆ ಪರಮಾತ್ಮನ ಅನುಗ್ರಹವು ಅವಶ್ಯಕ.'

'ಕಾಮವು ಸಾತ್ವಿಕ, ರಾಜಸ, ತಾಮಸ ಎಂಬ ತ್ರಿವಿಧಜೀವರನ್ನೂ ಆವರಿಸುತ್ತದೆ. ಬೆಂಕಿಗೆ ಹೊಗೆಯು ಆವರಿಸಿದಂತೆ ಸಾತ್ವಿಕರಿಗೆ ಸ್ವಲ್ಪ ಆವರಿಸುತ್ತದೆ. ಕೊಳೆಯು ಕನ್ನಡಿಗೆ ಆವರಕವಾಗುವಂತೆ ರಾಜಸರಿಗೆ ಇನ್ನೂ ಹೆಚ್ಚು ಆವರಕವಾಗುತ್ತದೆ. ಉಲ್ಬವು ಗರ್ಭಚೀಲ ಗರ್ಭಕ್ಕೆ ಆವರಕವಾಗುವಂತೆ ತಾಮಸರಿಗೆ ಅತ್ಯಂತವಾಗಿ ಆವರಕವಾಗುತ್ತದೆ. ಹೊಗೆಯು ತುಂಬಿದಾಗ ಅಗ್ನಿಯು ಕಾಣದೇ ಇರುವಂತೆ ಕಾಮವು ಆವರಿಸಿದಾಗ ಭಗವಂತನು ಕಾಣದಾಗುತ್ತಾನೆ. ಕನ್ನಡಿಗೆ ಕೊಳೆ ಮೆತ್ತಿದಾಗ ನಮ್ಮ ಪ್ರತಿಬಿಂಬವೇ ಕಾಣದಂತೆ ಕಾಮವು ಆವರಿಸಿದಾಗ ಜೀವನಿಗೆ ತನ್ನ ಜ್ಞಾನವೇ ಇಲ್ಲದಂತೆ ಆಗುತ್ತದೆ. ಉಲ್ಬವು ಗರ್ಭವನ್ನು ಆವರಿಸಿದಾಗ ಗರ್ಭವು ವ್ಯಾಪಾರವನ್ನು ಮಾಡಲು ಅಸಮರ್ಥವಾಗುವಂತೆ ಕಾಮವು ಆವರಿಸಿದಾಗ ಅಂತಃಕರಣವು ತನ್ನ ಸಾಮರ್ಥ್ಯವನ್ನು ಕಳೆದು ಕೊಳ್ಳುತ್ತದೆ.

ಕಾಮವೆಂಬ ಶತ್ರುವನ್ನು ಗೆಲ್ಲಲು ಆ ಶತ್ರುವಿಗೆ ಅಧಿಷ್ಠಾನ ಯಾವುದು? ಶತ್ರುವನ್ನು ಕೊಲ್ಲುವ ಆಯುಧ ಯಾವುದು ಎಂದು ತಿಳಿದುಕೊಳ್ಳಬೇಕು. ಏಕೆಂದರೆ ಶತ್ರುವಿನ ಅಧಿಷ್ಠಾನವನ್ನು ವಶ ಮಾಡಿಕೊಂಡರೆ ಶತ್ರುವು ವಶವಾಗುತ್ತಾನೆ. ಕಾಮಕ್ಕೆ ಶತ್ರುಗಳು ಮನಸ್ಸು ಮತ್ತು ಇಂದ್ರಿಯಗಳು. ಇಂದ್ರಿಯಗಳೇ ಅಧಿಷ್ಠಾನ. ಕೊಲ್ಲಲು ಬೇಕಾದ ಆಯುಧ ಜ್ಞಾನ. ಆದ್ದರಿಂದ ಕಾಮವನ್ನು ಗೆಲ್ಲಲು ಅಪೇಕ್ಷಿಸುವವರು ಮನಸ್ಸನ್ನೂ, ಇಂದ್ರಿಯವನ್ನೂ ಗೆದ್ದುಕೊಳ್ಳಬೇಕು.

ಈ ಶತ್ರುಗಳನ್ನು ಗೆಲ್ಲಲು ಬೇಕಾದ ಜ್ಞಾನವೆಂದರೆ ತಾರತಮ್ಯಜ್ಞಾನವೇ ಹೊರತಾಗಿ ಬೇರೆ ಅಲ್ಲ. ಭೂತಾಭಿಮಾನಿ ದೇವತೆಗಳಾದಧರಾದೇವಿ,ಶನೈಶ್ಚರ, ಬುಧ, ಸ್ವಾಹಾದೇವಿ, ಪರ್ಜನ್ಯ ಮತ್ತು ಗಣಪತಿ ಇವರುಗಳಿಗಿಂತ ಇಂದ್ರಿಯಾಭಿಮಾನಿ ದೇವತೆಗಳಾದ ದಿಗ್ದೇವತೆಗಳು, ಅಹಂಕಾರಿಕಪ್ರಾಣ, ಸೂರ್ಯ, ವರುಣ, ಅಶ್ವಿನೀದೇವತೆಗಳು, ಅಗ್ನಿ, ಇಂದ್ರ, ಜಯಂತ, ಮಿತ್ರ, ಮತ್ತು ದಕ್ಷಪ್ರಜಾಪತಿ ಈ ದೇವತೆಗಳು ಶ್ರೇಷ್ಠ. ಅವರಿಗಿಂತ ಶಬ್ದಾದಿವಿಷಯಗಳಿಗೆ ಅಭಿಮಾನಿದೇವತೆಗಳಾದ ಸೌಪರ್ಣೀ, ವಾರುಣೀ, ಪಾರ್ವತೀ ಇವರುಗಳು ಶ್ರೇಷ್ಠ. ಇವರುಗಳಿಗಿಂತ ಮನೋಭಿಮಾನಿಗಳಾದ ಗರುಡ, ಶೇಷ, ರುದ್ರ ಈದೇವತೆಗಳು ಶ್ರೇಷ್ಠ. ಅವರಿಗಿಂತ ಬುದ್ಧಿಗೆ ಅಭಿಮಾನಿಗಳಾದ ಸರಸ್ವತೀ, ಭಾರತಿಯರು ಶ್ರೇಷ್ಠ. ಅವರಿಗಿಂತ ಮಹತ್ತತ್ತ್ವಾಭಿಮಾನಿ ಬ್ರಹ್ಮ, ವಾಯುಗಳು ಶ್ರೇಷ್ಠ. ಅವರಿಗಿಂತಲೂ ಅವ್ಯಕ್ತತತ್ತ್ವಾಭಿಮಾನಿನೀ ರಮಾದೇವಿಯು ಶ್ರೇಷ್ಠ. ಅವರಿಗಿತಂಲೂ ಪರಮಪುರುಷನಾದ ಶ್ರೀಹರಿಯು ಶ್ರೇಷ್ಠ. ಶ್ರೀಹರಿಗೆ ಸಮನಾದವರು, ಉತ್ತಮವಾದವರು ಯಾರೂ ಇಲ್ಲ. ಇಂತಹ ಜ್ಞಾನವೆಂಬ ಆಯುಧದಿಂದ ಕಾಮವೆಂಬ ಶತ್ರುವನ್ನು ಸಂಹರಿಸು'.

ಈ ರೀತಿ ಈ ಅಧ್ಯಾಯದಲ್ಲಿ ಶ್ರೀಕೃಷ್ಣನು ಕರ್ಮಯೋಗದ ಅವಶ್ಯಕತೆಯನ್ನು ತಿಳಿಸಿದ್ದಾನೆ.

## ಚತುರ್ಥಾಧ್ಯಾಯಸಾರ

ಹಿಂದಿನ ಅಧ್ಯಾಯದಲ್ಲಿ ಹೇಳಿದ ಕರ್ಮಯೋಗದ ಬಗ್ಗೆ ಕೆಲವೊಂದು ಸ್ಪಷ್ಟತೆಯನ್ನು ನೀಡಲು ಮತ್ತು ಯಜ್ಞಭೇದಗಳನ್ನು ಹೇಳಲು ಈ ನಾಲ್ಕನೆಯ ಅಧ್ಯಾಯ ಹೊರಟಿದೆ. ಮೊದಲಿಗೆ ಶ್ರೀಕೃಷ್ಣನು ಈ ಕರ್ಮಯೋಗವು ಪರಂಪರಾಪ್ರಾಪ್ತವಾದುದೆಂದು ತಿಳಿಸುತ್ತಾನೆ.

'ಎಲೈ! ಅರ್ಜುನ, ಈ ಕರ್ಮಯೋಗವನ್ನು ನಾನು ಹಿಂದೆ ವಿವಸ್ವಾನ್‌ನಾಮಕ ಸೂರ್ಯನಿಗೆ ಉಪದೇಶ ಮಾಡಿದ್ದೆ. ಸೂರ್ಯನು ತನ್ನ ಮಗನಾದ ವೈವಸ್ವತಮನುವಿಗೆ ಉಪದೇಶಿಸಿದನು. ಮನುವು ಇಕ್ಷ್ವಾಕುಮಹಾರಾಜನಿಗೆ ಉಪದೇಶ ಮಾಡಿದನು. ಹೀಗೆ ಪರಂಪರಾಪ್ರಾಪ್ತವಾದ ಕರ್ಮಯೋಗವನ್ನು ರಾಜರ್ಷಿಗಳು ಹಿಡಿದು ಅನುಷ್ಠಾನ ಮಾಡಿದರು. ಆದ್ದರಿಂದ ನೀನೂ ಅನುಷ್ಠಾನ ಮಾಡು'.

ಹೀಗೆ ಶ್ರೀಕೃಷ್ಣನ ಮಾತಿನಲ್ಲಿ ಶ್ರೀಕೃಷ್ಣನು ಉಪದೇಶಕನೆಂದೂ ಸೂರ್ಯನು ಉಪದೇಶ ಮಾಡಲ್ಪಟ್ಟವನೆಂದೂ, ಆದ್ದರಿಂದ ಜೀವ-ಪರಮಾತ್ಮರಿಗೆ ಭೇದವಿದೆ ಎಂದು ತಿಳಿದುಬರುತ್ತದೆ. ಆ ಭೇದವನ್ನು ಯುಕ್ತಿಯುಕ್ತವಾಗಿ ತಿಳಿದುಕೊಳ್ಳುವ ಅಪೇಕ್ಷೆಯಿಂದ ಅರ್ಜುನರು ಶ್ರೀಕೃಷ್ಣನನ್ನು ಪ್ರಾರ್ಥಿಸುತ್ತಾರೆ. ಆಗ ಶ್ರೀಕೃಷ್ಣನು ಹೀಗೆ ಉತ್ತರಿಸುತ್ತಾನೆ.

'ಅರ್ಜುನ! ನಿನಗೂ ನಿನ್ನಂತಹ ಜೀವನಿಗೂ ನನಗೂ ಸಹ ಅನೇಕಜನ್ಮಗಳು ಕಳೆದಿವೆ. ಅವೆಲ್ಲ ನನಗೆ ಗೊತ್ತು. ನಿನಗೆ ತಿಳಿಯದು. ಹೀಗೆ ಈಶ್ವರನಾದ ನಾನು ಸರ್ವಜ್ಞ. ಜೀವನಾದ ನೀನು ಅಲ್ಪಜ್ಞ. ಆದ್ದರಿಂದ ಜೀವೇಶ್ವರರಿಗೆ ಭೇದ ಉಂಟೆಂದು ಸಿದ್ಧವಾಗುತ್ತದೆ. ಇಷ್ಟುಮಾತ್ರವಲ್ಲ. ಜೀವನಿಗೆ ತನ್ನ ಕರ್ಮಕ್ಕೆ ತಕ್ಕಂತೆ ದೇಹಗಳು ಬರುತ್ತವೆ. ಮತ್ತು ಹೋಗುತ್ತವೆ. ಹೀಗೆ ದೇಹಸಂಬಂಧವೆಂಬ ಜನ್ಮ, ದೇಹವಿಯೋಗವೆಂಬ ಮರಣಗಳು ಉಂಟು. ಆದರೆ ನಾನು ಹುಟ್ಟುವುದಿಲ್ಲ. ನನ್ನ ಇಚ್ಛೆಯಿಂದ ವಸುದೇವಾದಿಗಳ ದೇಹವನ್ನು ನಿಮಿತ್ತ ಮಾಡಿಕೊಂಡು ಸಚ್ಚಿದಾನಂದದೇಹದಿಂದಲೇ ಪ್ರಾದುರ್ಭವಿಸುತ್ತೇನೆ. ಆದ್ದರಿಂದಲೂ ಜೀವೇಶ್ವರರಿಗೆ ಅತ್ಯಂತಭೇದವುಂಟು.

ಯಾವಾಗ ಧರ್ಮಕ್ಕೆ ತೊಂದರೆ ಬರುತ್ತದೋ, ಮತ್ತು ಅಧರ್ಮವು ಮೇಲಾಗುತ್ತದೋ ಆಗ ನಾನು ಕಾಲಕಾಲಕ್ಕೆ ಅವತರಿಸುತ್ತೇನೆ. ನನ್ನ ಅವತಾರದ ಪ್ರಯೋಜನವೆಂದರೆ ಸಜ್ಜನರ ರಕ್ಷಣೆ, ದುಷ್ಟರ ನಾಶ, ಹಾಗೂ ಧರ್ಮಸಂಸ್ಥಾಪನೆ. ಹೀಗೆ ನನ್ನ ಜನ್ಮವೂ ಅಲೌಕಿಕ. ಕರ್ಮಗಳೂ ಅಲೌಕಿಕ. ಹೀಗೆ ತಿಳಿದವರು ಹುಟ್ಟು, ಸಾವುಗಳನ್ನು ಮೀರಿಕೊಂಡು ನನ್ನನ್ನು ಪಡೆಯುತ್ತಾರೆ.

ರಾಗ,ದ್ವೇಷ,ಭಯಗಳನ್ನು ಬಿಟ್ಟು ನಾನೇ ಸರ್ವೋತ್ತಮ ಎಂದು ತಿಳಿದು ನನ್ನನ್ನು ಆಶ್ರಯಿಸಿದ ಅನೇಕರು ಜ್ಞಾನರೂಪವಾದ ತಪಸ್ಸಿಂದ ನನ್ನನ್ನು ಪಡೆದಿದ್ದಾರೆ. ಯಾರು ನನ್ನನ್ನು ಹೇಗೆ ಭಜಿಸುತ್ತಾರೋ ಅದಕ್ಕೆ ತಕ್ಕಂತೆ ನಾನು ಫಲವನ್ನು ಕೊಡುತ್ತೇನೆ. ದೇವತೆಗಳನ್ನು ಭಜಿಸಿದಾಗ ಶೀಘ್ರವಾಗಿ ಫಲವಾಗುತ್ತದೆ. ಇದರಿಂದ ಶ್ರದ್ಧೆಯು ಹುಟ್ಟಿ ದೇವತೆಗಳನ್ನೇ ಆರಾಧನೆ ಮಾಡುತ್ತಾರೆ. ದೇವತೆಗಳನನ್ನು ಆರಾಧಿಸಿದವರಿಗೆ ಅಲ್ಪಫಲ. ನನ್ನನ್ನು ಆರಾಧಿಸಿದವರಿಗೆ ಮಹಾಫಲ. ಏಕೆಂದರೆ ಸತ್ವಾದಿಗುಣಗಳ ಹಾಗೂ ಶಮ, ದಮಾದಿ ಕರ್ಮಗಳ ವಿಭಾಗದಿಂದ ನಾನೇ ಬ್ರಾಹ್ಮಣಾದಿ ನಾಲ್ಕುವರ್ಣಗಳನ್ನು ಸೃಷ್ಟಿ ಮಾಡಿದ ತಂದೆಯಾಗಿದ್ದೇನೆ. ಲೋಕದಲ್ಲಿ ತಂದೆಯನ್ನು ಆಶ್ರಯ ಮಾಡಿದ ಮಕ್ಕಳಿಗೆ ವಿದ್ಯೆ, ಪತ್ನಿ, ಗೃಹ, ಎಲ್ಲಾ ದೊರಕುತ್ತದೆ. ಯಾರೋ ಪಕ್ಕದ ಮನೆಯವರನ್ನು ಆಶ್ರಯ ಮಾಡಿದರೆ ಒಂದು ಸಿಹಿ ಮಿಠಾಯಿಯು ದೊರಕೀತು. ಅದರಂತೆ ಜಗತ್ತಿಗೆ ತಂದೆಯಾದ ನನ್ನನ್ನು ಆಶ್ರಯಿಸಿದರೆ ಮೋಕ್ಷವೆಂಬ ಮಹಾಫಲ ಬರುತ್ತದೆ. ದೇವತೆಗಳನ್ನು ಆಶ್ರಯಿಸಿದರೆ ಸ್ವರ್ಗಾದಿಸ್ವಲ್ಪಫಲಗಳಾಗುತ್ತವೆ.

ನನಗೆ ಕರ್ಮದ ಲೇಪವಿಲ್ಲ. ನನಗೆ ಕರ್ಮದಲ್ಲಿ ಆಸೆಯೂ ಇಲ್ಲ. ಹೀಗೆ ನನ್ನನ್ನು ಯಾರು ತಿಳಿಯುತ್ತಾರೋ

ಅವರಿಗೂ ಕರ್ಮಲೇಪವಾಗುವುದಿಲ್ಲ. ಈ ರೀತಿ ಅನುಸಂಧಾನಪೂರ್ವಕವಾಗಿ ಪೂರ್ವಿಕರೆಲ್ಲ ಕರ್ಮವನ್ನು ಆಚರಿಸಿದ್ದಾರೆ. ಆದ್ದರಿಂದ ನೀನೂ ಕರ್ಮವನ್ನು ಆಚರಿಸು.

ಕರ್ಮ-ಅಕರ್ಮ-ವಿಕರ್ಮ ಎಂದು ಮೂರನ್ನು ತಿಳಿಯಬೇಕು. ಕರ್ಮ ಎಂದರೆ ವೇದವು ಏನನ್ನು ಮಾಡು ಎಂದು ವಿಧಿಸುತ್ತದೋ ಅದು. ಈ ವೇದೋಕ್ತಕರ್ಮವನ್ನು ಮಾಡದೇ ಬಿಡುವುದು ಅಕರ್ಮ. ವೇದವು ಏನನ್ನು ಮಾಡಬಾರದೆಂದು ಹೇಳುತ್ತದೋ ಅಂತಹ ವೇದವಿರುದ್ಧವಾದದ್ದು ವಿಕರ್ಮ. ಈ ಕರ್ಮ, ಅಕರ್ಮ, ವಿಕರ್ಮಗಳನ್ನು ವಿಂಗಡಿಸಿ ತಿಳಿದುಕೊಳ್ಳಬೇಕು. ಕರ್ಮದ ವಿಚಾರ ತಿಳಿಯುವುದು ಬಹಳ ಕಷ್ಟ.

ನಾವು ಎಚ್ಚೆತ್ತು ವ್ಯಾಪಾರ ಮಾಡುತ್ತಿದ್ದಾಗಲೂ ಪರಮಾತ್ಮನು ತಾನು ಮಾಡಿಸುತ್ತಿದ್ದಾನೆಂದು ತಿಳಿಯಬೇಕು. ನಮ್ಮ ನಿದ್ರಾವಸ್ಥೆಯಲ್ಲಿಯೂ ಶ್ವಾಸೋಚ್ಛ್ವಾಸಾದಿ ದೇಹದ ವ್ಯಾಪಾರಗಳನ್ನು ದೇವರೇ ಮಾಡಿಸುತ್ತಿದ್ದಾನೆಂದು ತಿಳಿಯಬೇಕು. ಅದರಂತೆ ನಾವು ಕರ್ಮ ಮಾಡುತ್ತಿರುವಾಗಲೂ ನಾವು ಸ್ವತಂತ್ರವಾಗಿ ಮಾಡುತ್ತಿಲ್ಲ ಎಂದು ತಿಳಿಯಬೇಕು. ಹೀಗೆ ತಿಳಿದರೆ ಕರ್ಮಲೇಪವಾಗುವುದಿಲ್ಲ.

ಕರ್ಮಸಾಧನಗಳಾದ ದೇಹೇಂದ್ರಿಯಾದಿಗಳು, ಅದರಂತೆ ಯಜ್ಞಸಾಧನಗಳಾದ ಸ್ರುಕ್-ಸ್ರುವ ಮೊದಲಾದವು, ಚರು, ಆಜ್ಯ ಮೊದಲಾದ ಹವಿರ್ದ್ರವ್ಯಗಳು, ಹೋಮಕ್ಕೆ ಅಧಿಷ್ಠಾನವಾದ ಅಗ್ನಿ, ಹೋಮವೆಂಬ ಕ್ರಿಯೆ, ಕರ್ಮಗಳು, ಇದಕ್ಕೆ ಬೇಕಾದ ಚಿಂತನೆಗಳು ಎಲ್ಲವೂ ಪರಮಾತ್ಮನ ಅಧೀನ. ಹೀಗೆ ತಿಳಿದಾಗ ಪರಬ್ರಹ್ಮನನ್ನೇ ಹೊಂದಬಹುದು.

ಯಜ್ಞಗಳಲ್ಲಿ ಅನೇಕವಿಧವಿದೆ. ಯೋಗಿಗಳು ದೇವರ ಧ್ಯಾನವನ್ನೇ ಯಜ್ಞ ಎಂದು ಸಮರ್ಪಣೆ ಮಾಡುತ್ತಾರೆ. ಕರ್ಮಾಧಿಕಾರವುಳ್ಳ ಗೃಹಸ್ಥರು ಪ್ರಸಿದ್ಧವಾದ ಯಜ್ಞದಿಂದ ದೇವರನ್ನೇ ಆರಾಧಿಸುತ್ತಾರೆ. ಕೆಲವರು ಮನೋನಿಗ್ರಹವೆಂಬ ಅಗ್ನಿಯಲ್ಲಿ ಇಂದ್ರಿಯಗಳನ್ನು ಹೋಮಿಸುತ್ತಾರೆ. ಎಂದರೆ ಮನೋನಿಯಮದಿಂದ ಇಂದ್ರಿಯಗಳನ್ನು ನಿಗ್ರಹಿಸಿ ಅದನ್ನೇ ಯಜ್ಞವೆಂದು ಭಾವಿಸುತ್ತಾರೆ. ಕೆಲವರು ವಿಷಯಗಳೆಂಬ ಆಹುತಿಗಳನ್ನು ಇಂದ್ರಿಯಗಳೆಂಬ ಅಗ್ನಿಯಲ್ಲಿ ಹೋಮಿಸುತ್ತಾರೆ. ಎಂದರೆ ವಿಷಯಭೋಗವನ್ನೇ ಯಜ್ಞವೆಂದು ಭಾವಿಸುತ್ತಾರೆ. ಇನ್ನು ಪ್ರಾಣನನ್ನು ಅಪಾನನಲ್ಲಿಯೂ. ಅಪಾನನನ್ನು ಪ್ರಾಣನಲ್ಲಿಯೂ ಹೋಮಿಸುತ್ತಾರೆ. ಎಂದರೆ ಕುಂಭಕ ಪ್ರಾಣಾಯಾಮವನ್ನು ಮಾಡಿ ಅದನ್ನೇ ಯಜ್ಞವೆಂದು ಭಾವಿಸುತ್ತಾರೆ. ಕೆಲವರು ಭೋಗಗಳನ್ನು ನಿಯಂತ್ರಣಮಾಡಿ ಅದನ್ನೇ ಯಜ್ಞವೆಂದು ಭಾವಿಸುತ್ತಾರೆ. ಹೀಗೆ ಕೆಲವರು ದ್ರವ್ಯಯಜ್ಞ, ಕೆಲವರು ಜಪಯಜ್ಞ, ಕೆಲವರು ಜ್ಞಾನಯಜ್ಞಗಳಲ್ಲಿ ನಿರತರಾಗಿದ್ದಾರೆ. ಇವರೆಲ್ಲರೂ ಯಜ್ಞವನ್ನು ಬಲ್ಲವರೇ ಆಗಿದ್ದಾರೆ. ಯಜ್ಞದಿಂದ ಪಾಪಗಳನ್ನು ಪರಿಹಾರ ಮಾಡಿಕೊಳ್ಳುತ್ತಾರೆ. ಯಜ್ಞದಲ್ಲಿ ಉಳಿದ ಆಹಾರವನ್ನು ಭೋಜನ ಮಾಡುತ್ತಾ ಜ್ಞಾನದ್ವಾರಾ ಭಗವಂತನನ್ನು ಹೊಂದುತ್ತಾರೆ.

ದ್ರವ್ಯಯಜ್ಞಕ್ಕಿಂತಲೂ ಜ್ಞಾನಯಜ್ಞವು ಶ್ರೇಷ್ಠ. ಏಕೆಂದರೆ ಜ್ಞಾನದಿಂದಾಗುವ ಫಲದಲ್ಲಿ ದ್ರವ್ಯಯಜ್ಞದಿಂದ ಉಂಟಾಗುವ ಫಲಗಳು ಅಡಗಿವೆ. ಇಂತಹ ಜ್ಞಾನವು ಬರಬೇಕಾದರೆ ಗುರುಗಳಿಗೆ ಶರಣಾಗತರಾಗಿರಬೇಕು. ಅವರ ಸೇವೆ ಮಾಡಬೇಕು. ಅವರನ್ನು ಪ್ರಶ್ನೆ ಮಾಡಬೇಕು. ಆಗ ತತ್ತ್ವಜ್ಞಾನಿಗಳಾದ ಗುರುಗಳು ಜ್ಞಾನೋಪದೇಶ ಮಾಡುತ್ತಾರೆ. ಅರ್ಜುನ! ನಿನಗಾದರೋ ನಾನೇ ಉಪದೇಶ ಮಾಡುತ್ತೇನೆ.

ಯಾರು ಯೋಗದಿಂದ ಕರ್ಮಸನ್ಯಾಸಮಾಡಿದ್ದಾರೋ, ಜ್ಞಾನದಿಂದ ಎಲ್ಲ ಸಂಶಯಗಳನ್ನು ಪರಿಹಾರ ಮಾಡಿಕೊಂಡಿದ್ದಾರೋ, ನಾನೇ ಸ್ವಾಮಿ ಎಂದು ದೃಢವಾಗಿ ನಂಬಿದ್ದಾರೋ ಅವರಿಗೆ ಕರ್ಮಲೋಪವಾಗುವುದಿಲ್ಲ. ಆದ್ದರಿಂದ ಜ್ಞಾನವೆಂಬ ಖಡ್ಗದಿಂದ ಮನಸ್ಸಿನ ಸಂಶಯಗಳನ್ನು ಛೇದನ ಮಾಡಿಕೊಂಡು ಸ್ವಕರ್ಮವಾದ ಯುದ್ಧಕ್ಕಾಗಿ ಸನ್ನದ್ಧನಾಗು.

## ಪಂಚಮಾಧ್ಯಾಯಸಾರ

ಈ ರೀತಿ ಕೃಷ್ಣನ ಉಪದೇಶ ಕೇಳಿದ ಅರ್ಜುನರು ,'ಶ್ರೀಕೃಷ್ಣ! ಒಮ್ಮೆ ಸನ್ನ್ಯಾಸವನ್ನು ಪ್ರಶಂಸೆ ಮಾಡುತ್ತೀಯೆ. ಮತ್ತೆ ಯೋಗವನ್ನು ಪ್ರಶಂಸೆ ಮಾಡುತ್ತೀಯೆ. ಇವರೆಡರಲ್ಲಿ ಯಾವುದು ಶ್ರೇಷ್ಠ ಎಂದು ತಿಳಿಸು. ನಾನು ಅದನ್ನೇ ಅನುಷ್ಠಾನ ಮಾಡುತ್ತೇನೆ 'ಎಂದು ಪ್ರಾರ್ಥನೆ ಮಾಡಿದರು. ಆಗ ಶ್ರೀಕೃಷ್ಣನು ಸನ್ನ್ಯಾಸ ಮತ್ತು ಯೋಗಗಳ ಸ್ವರೂಪವನ್ನು ಹೀಗೆ ಸ್ಪಷ್ಟ ಪಡಿಸಿದನು.

ಕೆಲವು ಅಜ್ಞಾನಿಗಳು ಸನ್ನ್ಯಾಸ ಎಂದರೆ ಯತ್ಯಾಶ್ರಮ, ಯೋಗ ಎಂದರೆ ಗೃಹಸ್ಥಾಶ್ರಮ ಎಂದು ತಿಳಿದಿದ್ದಾರೆ. ಸನ್ನ್ಯಾಸಿಗಳಿಗೆ ಕರ್ಮವು ಬೇಡ. ಗೃಹಸ್ಥರಿಗೆ ಜ್ಞಾನವು ಬೇಡ ಎಂದು ಭಾವಿಸುತ್ತಾರೆ. ಇದು ಸರಿಯಲ್ಲ. ಈ ಸಂದರ್ಭದಲ್ಲಿ ಸನ್ನ್ಯಾಸ ಯೋಗ ಎಂಬ ಶಬ್ದಗಳಿಗೆ 'ಯತ್ಯಾಶ್ರಮ, ಗೃಹಸ್ಥಾಶ್ರಮ' ಎಂದು ಅರ್ಥವಲ್ಲ. ಏಕೆಂದರೆ, 'ಸನ್ನ್ಯಾಸಕ್ಕಿಂತ ಯೋಗವು ಶ್ರೇಷ್ಠ' ಎಂದು ನಾನೇ ಹೇಳಿದ್ದೇನೆ. 'ಯತ್ಯಾಶ್ರಮದಲ್ಲಿ ನನಗೆ ಬಹಳ ಪ್ರೀತಿಯುಂಟು' ಎಂದೂ ಸಹ ನಾನು ಹೇಳಿದ್ದೇನೆ. ಹೀಗಾಗಿ ಯತ್ಯಾಶ್ರಮಕ್ಕಿಂತ ಗೃಹಸ್ಥಾಶ್ರಮವು ಶ್ರೇಷ್ಠವಾಗುವ ಹಾಗಿಲ್ಲ. ಹಾಗಾದರೆ ಸನ್ನ್ಯಾಸ, ಮತ್ತು ಯೋಗ ಎಂಬ ಶಬ್ದಗಳಿಗೆ ನನಗೆ ಸಮ್ಮತವಾದ ಅರ್ಥವೇನೆಂದರೆ 'ಸನ್ನ್ಯಾಸ' ಎಂದರೆ ಕರ್ಮಾಚರಣೆಯನ್ನು ಮಾಡುವಾಗ ಫಲಕಾಮನೆಯನ್ನು ಬಿಡತಕ್ಕದ್ದು. 'ಯೋಗ' ಎಂದರೆ ಸ್ವೋಚಿತಕರ್ಮಾನುಷ್ಠಾನ ಮಾಡತಕ್ಕದ್ದು. ಮುಖ್ಯವಾದ ಯೋಗದಲ್ಲಿ ಇವೆರೆಡೂ ಅವಿಭಾಜ್ಯ ಅಂಗಗಳು. ಇವೆರಡರ ಪೈಕಿ ಸನ್ನ್ಯಾಸಕ್ಕಿಂತ ಯೋಗವು ಶ್ರೇಷ್ಠ. ಯೋಗ ಎಂಬ ಕರ್ಮಾನುಷ್ಠಾನ ಮಾಡದೇ ಕೇವಲಕಾಮನೆಯನ್ನು ಬಿಟ್ಟರೆ ಅದು ಮನಸ್ಸಿನ ಆಯಾಸದಿಂದ ದುಃಖ ಹೊಂದಲು ಮಾತ್ರ ಕಾರಣವಾಗುತ್ತದೆ. ಫಲಾಪೇಕ್ಷೆಯನ್ನು ಬಿಡದೇ ಕರ್ಮಾನುಷ್ಠಾನ ಮಾಡಿದರೆ ಅವನು ಮುಖ್ಯಯೋಗಿ ಆಗುವುದಿಲ್ಲ. ಅಂತಹ ಕಾಮಕರ್ಮಾನುಷ್ಠಾನದಿಂದ ಜ್ಞಾನೋದಯ ಆಗುವುದಿಲ್ಲ. ಆಗ ಸನ್ನ್ಯಾಸ, ಯೋಗ ಎರಡೂ ಅವಶ್ಯಕ. ಅವೆರಡೂ ಸೇರಿಕೊಂಡೇ ಶ್ರೇಯಸ್ಸನ್ನು ಉಂಟುಮಾಡುತ್ತವೆ.

ಕಿವಿಯಿಂದ ಕೇಳುತ್ತಾ, ಕಣ್ಣಿನಿಂದ ನೋಡುತ್ತಾ, ತ್ವಚೆಚರ್ಮದಿಂದ ಮುಟ್ಟುತ್ತಾ, ನಾಲಿಗೆಯಿಂದ ರುಚಿ ನೋಡುತ್ತಾ, ಮೂಗಿನಿಂದ ಮೂಸಿ ನೋಡುತ್ತಾ, ಬಾಯಿಂದ ಮಾತಾಡುತ್ತಾ, ಕೈಯಿಂದ ಕೆಲಸ ಮಾಡುತ್ತಾ, ಕಾಲಿನಿಂದ ಓಡಾಡುತ್ತಾ, ಪಾಯುವಿನಿಂದ ವಿಸರ್ಜನೆ ಮಾಡುತ್ತಾ, ಉಪಸ್ಥದಿಂದ ರತಿ ಹೊಂದುತ್ತಾ, ಹೆಚ್ಚೇನು ಹೇಳುವುದು? ಕಣ್ಣು ಮುಚ್ಚುತ್ತಾ - ತೆರೆಯುತ್ತಾ, ಉಸಿರಾಡುತ್ತಾ ಇರುವುದೂ ಸಹ ನನ್ನ ಅಧೀನವಲ್ಲ; ದೇವರ ಅಧೀನ ಎಂದು ತಿಳಿಯಬೇಕು. ಭಗವಂತನ ಪ್ರೇರಣೆಯಿಂದಾಗಿ ಆಯಾಯಾ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳಲ್ಲಿ ವ್ಯಾಪಾರ ಮಾಡುತ್ತಿವೆ ಎಂದು ತಿಳಿಯಬೇಕು.

ಎಲ್ಲ ಕರ್ಮಗಳು ಪ್ರಕೃತಿಯಿಂದ ನಡೆಯುತ್ತಿವೆ. ಪ್ರಕೃತಿಯೆಂಬುವ ಶಬ್ದಕ್ಕೆ ಮೂರು ಅರ್ಥ. ಪ್ರಕೃಷ್ಟವ್ಯಾಪಾರ ಮಾಡಿಸತಕ್ಕ ಭಗವಂತನೂ ಪ್ರಕೃತಿ ಎನಿಸುತ್ತಾನೆ. ಎಲ್ಲಾ ಕ್ರಿಯೆಗಳಿಗೂ ಮೂಲಕಾರಣವಾದ ಪ್ರಧಾನತತ್ತ್ವವೂ ಪ್ರಕೃತಿ ಎನಿಸುತ್ತದೆ. ಇದಕ್ಕೆ ಅಭಿಮಾನಿನಿಯಾದ ರಮಾದೇವಿಯೂ ಪ್ರಕೃತಿ ಎನಿಸುತ್ತಾರೆ. ಹೀಗೆ ಭಗವಂತನ ಪ್ರೇರಣೆಯಿಂದ ರಮಾದೇವಿಯ ಅಧೀನವಾಗಿ ಜಡಪ್ರಕೃತಿಯಿಂದ ನಡೆಯುತ್ತಿರುವ ಕ್ರಿಯೆಗಳನ್ನು ಜೀವನು ತನ್ನದೆಂದು ಭಾವಿಸುತ್ತಾನೆ. ಆದ್ದರಿಂದಲೇ ಸಂಸಾರಕ್ಕೆ ಬೀಳುತ್ತಾನೆ.

ನಾನು ಸ್ವತಂತ್ರಕರ್ತನಲ್ಲ. ಭಗವಂತನು ಸ್ವತಂತ್ರ. ಭಗವಂತನ ಅಧೀನವಾಗಿ ನಾನು ಮಾಡುತ್ತಿದ್ದೇನೆ. ಈ ಭಗವತ್ಪೂಜಾರೂಪವಾದ ಕರ್ಮದಿಂದ ಭಗವಂತನು ಸಂತೋಷಪಡಲಿ. ನನಗೆ ಬೇರಾವ ಫಲವೂ ಬೇಡಎಂದು ಚಿಂತಿಸುವುದೇ ಕರ್ಮಸನ್ನ್ಯಾಸ ಎಂದು ಕರೆಸುತ್ತದೆ. ಇಂತಹ ಕರ್ಮಸನ್ನ್ಯಾಸದಿಂದ ಸಹಿತವಾದ

ಸ್ವೋಚಿತಕರ್ಮಾನುಷ್ಠಾನದಿಂದ ಅಂತಃಕರಣ ಶುದ್ಧಿಯಾಗುತ್ತದೆ. ಅತಂಹ ಯೋಗಿಗೆ ಅಪರೋಕ್ಷಜ್ಞಾನವಾಗುತ್ತದೆ.

ಹೀಗೆ ಜ್ಞಾನವನ್ನು ಪಡೆಯಲು ಇಚ್ಛಿಸುವ ಯೋಗಿಗೆ ಸಾಮ್ಯಚಿಂತನೆ ಎಂಬ ಮತ್ತೊಂದು ಧರ್ಮವೂ ಬೇಕು. ಇಲ್ಲಿ ಸಾಮ್ಯ ಎಂಬುವುದಕ್ಕೆ ಮೂರು ಅರ್ಥ. ವಿದ್ಯಾವಿನಯಸಂಪನ್ನನಾದ ಬ್ರಾಹ್ಮಣ, ಗೋವು, ಆನೆ, ನಾಯಿ, ನಾಯಿಯ ಮಾಂಸವನ್ನು ತಿನ್ನತಕ್ಕವನು ಎಲ್ಲರಲ್ಲಿಯೂ ಇರುವ ಭಗವಂತನು ಸಮಾನನಾಗಿದ್ದಾನೆ ಎಂದರೆ ಎಲ್ಲ ಕಡೆ ಇರುವ ಭಗವಂತನ ರೂಪಗಳಲ್ಲಿ ತಾರತಮ್ಯಗಳಿಲ್ಲ. ಹೀಗೆ ತಿಳಿಯುವುದು ಒಂದುವಿಧವಾದ ಸಾಮ್ಯದೃಷ್ಟಿ. ಯಾರು ಯಾರನ್ನು ಹೇಗೆ ಹೇಗೆ ಭಾವಿಸಬೇಕೋ ಹಾಗೆಯೇ ಕಾಣತಕ್ಕದ್ದು ಎರಡನೆಯ ಸಾಮ್ಯದೃಷ್ಟಿ. ಲಾಭ-ನಷ್ಟ, ಜಯ -ಅಪಜಯ, ಮಾನ-ಅಪಮಾನ, ನಿಂದಾ-ಸ್ತುತಿ, ಸುಖ-ದುಃಖಗಳನ್ನು ಸಮಾನವಾಗಿ ಕಾಣತಕ್ಕದ್ದು ಮೂರನೆಯ ಸಾಮ್ಯದೃಷ್ಟಿ. ಸುಖ-ದುಃಖಗಳನ್ನು ಸಮವಾಗಿ ಕಾಣುವುದು ಎಂದರೆ ದುಃಖವನ್ನು ಹೇಗೆ ಬೇಡ ಎನ್ನುತ್ತೇವೋ ವಿಷಯಸುಖವನ್ನೂ ಹಾಗೇ ಬೇಡ ಎನ್ನಬೇಕು. ಭಗವದಿಚ್ಛೆಯಂತೆ ಸುಖ-ದುಃಖಗಳು ಬಂದಾಗ ನಮ್ಮ ಪೂರ್ವಕರ್ಮಕ್ಕೆ ತಕ್ಕಂತೆ ಭಗವಂತನು ಯಾರನ್ನೋ ನಿಮಿತ್ತಮಾಡಿ ಈ ಸುಖ-ದುಃಖಗಳನ್ನು ಕೊಟ್ಟಿದ್ದಾನೆ ಎಂದು ಅನುಸಂಧಾನ ಮಾಡುತ್ತಾ ಹಿಗ್ಗು-ಕುಗ್ಗು ಇಲ್ಲದಂತೆ ಇರಬೇಕು. ಇದರಂತೆಯೇ ಲಾಭ-ನಷ್ಟಗಳಲ್ಲಿ ತಿಳಿಯಬೇಕು. ಇಂತಹ ಸಾಮ್ಯದೃಷ್ಟಿಯು ಜ್ಞಾನಿಗಳಿಗೆ ಸಹಜವಾಗಿ ಇರುತ್ತದೆ. ಜ್ಞಾನಾಪೇಕ್ಷಿಗಳು ಪ್ರಯತ್ನಪೂರ್ವಕವಾಗಿ ಇಂತಹ ದೃಷ್ಟಿಯನ್ನು ಬೆಳೆಸಿಕೊಳ್ಳಬೇಕು.

ಹೀಗೆ ಯೋಗವನ್ನೂ ಸನ್ಯಾಸವನ್ನೂ ಆಚರಿಸುತ್ತಾ ಭಗವಂತನ ಧ್ಯಾನವನ್ನು ಮಾಡಬೇಕು. ಇದಕ್ಕಾಗಿ ಆಸನದಲ್ಲಿ ಕುಳಿತು, ಪ್ರಾಣಾಯಾಮ ಮಾಡಿ, ಇಂದ್ರಿಯಗಳನ್ನೂ ಮನಸ್ಸನ್ನೂ ವಿಷಯಗಳಿಂದ ಹಿಂತಿರುಗಿಸಿ ಏಕಾಗ್ರಚಿತ್ತದಿಂದ ದೇವರನ್ನು ಚಿಂತಿಸಬೇಕು.

## ಷಷ್ಠಾಧ್ಯಾಯಸಾರ

ಹಿಂದಿನ ಅಧ್ಯಾಯದ ಕಡೆಯಲ್ಲಿ ಪ್ರಸ್ತಾವ ಮಾಡಿದ ಧ್ಯಾನಯೋಗವನ್ನು ವಿಸ್ತರಿಸಲು ಈ ಅಧ್ಯಾಯ ಹೊರಟಿದೆ. ಮೊದಲಿಗೆ ಶ್ರೀಕೃಷ್ಣನು ಹಿಂದೆ ಹೇಳಿದ ಯೋಗ, ಸನ್ಯಾಸಗಳನ್ನು ಸಂಗ್ರಹವಾಗಿ ಸ್ಪಷ್ಟಪಡಿಸುತ್ತಾನೆ.

ಸನ್ಯಾಸಿ ಎಂದರೆ ಅಗ್ನಿಯನ್ನೂ ಕರ್ಮಗಳನ್ನೂ ಬಿಟ್ಟ ಯತಿಯಲ್ಲ. ಕರ್ಮಫಲವನ್ನು ಇಚ್ಛಿಸದೇ ತನ್ನ ನಿಯತ ಕರ್ಮವನ್ನು ಯಾರು ಮಾಡುತ್ತಾನೋ ಅವನೇ ಸನ್ಯಾಸಿ, ಯೋಗಿ ಎಂದು ಕರೆಸುತ್ತಾನೆ. ಏಕೆಂದರೆ ಸನ್ಯಾಸಿಗೂ ಸಹ ಅವನಿಗೆ ತಕ್ಕ ಯಜ್ಞ, ತಪಸ್ಸು, ದಾನಗಳು ಇದ್ದೇ ಇದೆ. ಈ ವಿಷಯವನ್ನು ಕಡೆಯ 18ನೆಯ ಅಧ್ಯಾಯದಲ್ಲಿ ಮತ್ತೂ ಸ್ಪಷ್ಟಪಡಿಸಲಾಗುತ್ತದೆ.

ಯಾರು ಯೋಗದ ಮೆಟ್ಟಿಲನ್ನು ಹತ್ತಲು ಇಚ್ಛಿಸುತ್ತಿದ್ದಾನೋ ಅಂತಹವನಿಗೆ ಕರ್ಮವು ಸಹಕಾರಿ ಕಾರಣವಾಗುತ್ತದೆ. ಯಾರು ಯೋಗದ ಮೆಟ್ಟಿಲನ್ನು ಹತ್ತಿ ಜ್ಞಾನಿಯಾಗಿದ್ದಾನೋ ಅಂತಹ ಯೋಗಾರೂಢನಾದವನಿಗೆ ದೇವರ ಧ್ಯಾನವು ಮಹಾಸುಖಕ್ಕೆ ಕಾರಣವಾಗುತ್ತದೆ. ಜ್ಞಾನವನ್ನು ಪಡೆಯಲು ಇಚ್ಛಿಸುವವನು 'ನಾನಾಜನಶುಶ್ರೂಷೆ 'ಎಂಬ ಕರ್ಮವನ್ನು ಮಾಡಬೇಕು. ನಾನಾಜನಶುಶ್ರೂಷೆಯು ಭಗವಂತನಿಗೆ ನಾವು ಒಪ್ಪಿಸಬೇಕಾದ ಒಂದು ಕಾಣಿಕೆಯಂತೆ ಎಂದು ಬಲ್ಲವರು ಹೇಳುತ್ತಾರೆ. ಜ್ಞಾನಿಗೆ ನಾನಾಜನಶುಶ್ರೂಷೆಯು ಬೇಕಿಲ್ಲ. ತನಗಿಂತ ಉತ್ತಮರ ಸೇವೆಯಿಂದಲೇ ಅವನು ಕೃತಕೃತ್ಯನಾಗುತ್ತಾನೆ.

ಭಗವಂತನ ಅನುಗ್ರಹದಿಂದ ತನ್ನ ಬುದ್ಧಿಯಿಂದ ತನ್ನನ್ನು ಉದ್ಧಾರ ಮಾಡಿಕೊಳ್ಳಬೇಕು. ತನ್ನನ್ನು ತಾನು ಅನರ್ಥಕ್ಕೆ ಗುರಿ ಮಾಡಿಕೊಳ್ಳಬಾರದು. ಮನಸ್ಸೇ ನಮಗೆ ಶತ್ರುವಂತೆಯೂ ಮಿತ್ರನಂತೆಯೂ ವರ್ತಿಸುತ್ತದೆ. ಅದು ಹೇಗೆಂದರೆ

ಯಾರು ಭಗವಂತನ ಪ್ರಸಾದದಿಂದ ಬುದ್ಧಿಯಿಂದ ಮನಸ್ಸನ್ನು ಸ್ವಾಧೀನ ಮಾಡಿಕೊಂಡಿದ್ದಾರೋ ಅವರಿಗೆ ಮನಸ್ಸು ಮಿತ್ರನಂತೆ ಹಿತಕಾರಿಯಾಗುತ್ತದೆ. ಇದಕ್ಕೆ ವಿರುದ್ಧವಾಗಿ ಯಾರು ಮನಸ್ಸನ್ನು ವಶ ಮಾಡಿಕೊಂಡಿಲ್ಲವೋ ಅವರಿಗೆ ಮನಸ್ಸೇ ಶತ್ರುವಂತೆ ಅನರ್ಥಕಾರಿಯಾಗುತ್ತದೆ. ಆದ್ದರಿಂದ ಮನಸ್ಸನ್ನು ವಶ ಮಾಡಿಕೊಂಡು ಧ್ಯಾನಯೋಗವನ್ನು ಮಾಡಬೇಕು. ಈ ಧ್ಯಾನಯೋಗ ಮಾಡುವವರಲ್ಲಿ ಹಿಂದೆ ಹೇಳಿದಂತೆ ಸಮಬುದ್ಧಿಯುಳ್ಳವನು ವಿಶಿಷ್ಟನಾಗುತ್ತಾನೆ.

ಆ ಸಮಬುದ್ಧಿಯನ್ನೇ ಶ್ರೀಕೃಷ್ಣನು ವಿಶ್ಲೇಷಣೆ ಮಾಡುತ್ತಾನೆ. ಅನಿಮಿತ್ತೋಪಕಾರಿಗೆ ಸುಹೃತ್ ಎನ್ನುತ್ತಾರೆ. ಸ್ನೇಹಿತನನ್ನು ಮಿತ್ರ ಎನ್ನುತ್ತಾರೆ. ಅನಿಷ್ಟವನ್ನು ಉಂಟುಮಾಡುವವನನ್ನು ದ್ವೇಷಿ ಎನ್ನುತ್ತಾರೆ. ಸಂಹಾರ ಮಾಡುವವನನ್ನು ದ್ವೇಷಿ ಎನ್ನುತ್ತಾರೆ. ಸಮಯ ಬಿದ್ದಾಗ ಉಪಕಾರವನ್ನೂ ಅಪಕಾರವನ್ನೂ ಮಾಡುವವನನ್ನು ಮಧ್ಯಸ್ಥ ಎನ್ನುತ್ತಾರೆ. ಮಾಡಬೇಕಾದ ಉಪಕಾರ, ಅಪಕಾರ ಎರಡನ್ನೂ ಮಾಡದವನನ್ನು ಉದಾಸೀನ ಎನ್ನುತ್ತಾರೆ. ಸಂಬಂಧಿಯನ್ನು ಬಂಧು ಎನ್ನುತ್ತಾರೆ. ಈ ಎಲ್ಲರಲ್ಲೂ ಭಗವಂತನು ತಾರತಮ್ಯವಿಲ್ಲದೇ ಇದ್ದಾನೆ. ಆ ಭಗವಂತನಿಂದಲೇ 'ನನಗೆ ಅವನಿಂದ ಪ್ರೇಮಾದಿಗಳು ಉಂಟಾಗುತ್ತವೆ' ಎಂದು ಚಿಂತಿಸುವುದೇ ಸಾಮ್ಯ ಎನಿಸುತ್ತದೆ. ಇಂತಹ ಸಾಮ್ಯಬುದ್ಧಿ ಇದ್ದಾಗ ಮನಸ್ಸಿನಲ್ಲಿ ರಾಗ,ದ್ವೇಷಗಳು ಇರುವುದಿಲ್ಲ. ಆಗ ಧ್ಯಾನಯೋಗವು ಸಿದ್ಧಿಸುತ್ತದೆ.

ಧ್ಯಾನಯೋಗವನ್ನು ಮಾಡಬೇಕಾದರೆ ಆಸನಜಯ ಬೇಕು. ಏಕೆಂದರೆ ದೇಹವು ಚಂಚಲವಾದಾಗ ಮನಸ್ಸೂ ಚಂಚಲವಾಗುತ್ತದೆ. ನಿರಂತರ ಚಿಂತನರೂಪವಾದ ಧ್ಯಾನವು ಮಾಡಬೇಕಾದರೆ ಶುಚಿಯಾದ ದೇಶದಲ್ಲಿ ಸಮವಾದ ಆಸನವನ್ನು ಹಾಕಿಕೊಂಡು ಕುಳಿತುಕೊಳ್ಳಬೇಕು. ಆ ಆಸನವು ಅತೀಎತ್ತರವೂ, ಅತೀತಗ್ಗೂ ಆಗಿರಬಾರದು. ಆ ಆಸನವು ಉಣ್ಣೆ ಮೊದಲಾದ ವಸ್ತ್ರರೂಪವಾಗಿರಬಹುದು. ಅಥವಾ ಕೃಷ್ಣಾಜಿನ ಮೊದಲಾದ ಚರ್ಮರೂಪದ್ದಾಗಿರಬಹುದು. ಅಥವಾ ದರ್ಭಮಯವಾದ ಆಸನವಾಗಿರ ಬಹುದು. ಅಥವಾ ಮೊದಲು ದರ್ಭೆಯನ್ನು ಹಾಸಿ, ಅದರ ಮೇಲೆ ಅಜಿನದ ಆಸನವನ್ನು ಹಾಕಿ, ಅದರ ಮೇಲೆ ವಸ್ತ್ರದ ಆಸನವನ್ನು ಹಾಕಿಕೊಳ್ಳಬಹುದು. ದಿಕ್ಕುಗಳನ್ನು ನೋಡದಂತೆ ಮೂಗಿನ ಕಡೆಯಲ್ಲಿ ದೃಷ್ಟಿ ಕೊಡಬೇಕು. ಅರೆಗಣ್ಣು ಮುಚ್ಚಿದಾಗ ಸಹಜವಾಗಿ ಮೂಗಿನ ತುದಿಯಲ್ಲಿ ದೃಷ್ಟಿ ಬರುತ್ತದೆ.

ರೇಚಕ, ಪೂರಕ, ಕುಂಭಕಕ್ರಮದಿಂದ ಪ್ರಾಣಾಯಾಮವನ್ನು ಮಾಡಬೇಕು. ಇದರಿಂದ ನಾಡೀಶುದ್ಧಿಯಾಗಿ ಧ್ಯಾನಕ್ಕೆ ಅನುಕೂಲವಾಗುತ್ತದೆ. ಮನಸ್ಸು ವಿಷಯದ ಕಡೆ ಹೋದಾಗ ಬಲಾತ್ಕಾರವಾಗಿ ಸೆಳೆದು ಭಗವಂತನ ಕಡೆ ಕೊಡುತ್ತಿರಬೇಕು.

ಧ್ಯಾನಯೋಗವು ಅತೀಉಪವಾಸ ಮಾಡುವವನಿಗೂ ಸಿದ್ಧಿಸುವುದಿಲ್ಲ. ಅತೀಭೋಜನ ಮಾಡುವವನಿಗೂ ಸಿದ್ಧಿಸುವುದಿಲ್ಲ. ನಿದ್ರಾಳುವಿಗೂ ಸಿದ್ಧಿಸುವುದಿಲ್ಲ. ಅತೀಎಚ್ಚರವಿದ್ದವನಿಗೂ ಸಿದ್ಧಿಸುವುದಿಲ್ಲ. ಆದ್ದರಿಂದ ಆಹಾರ, ವಿಹಾರಗಳು, ನಿದ್ದೆ ಮತ್ತು ಎಚ್ಚರಗಳು ಧ್ಯಾನಯೋಗಕ್ಕೆ ಅಡ್ಡಿಯಾಗದಂತೆ ಎಷ್ಟು ಬೇಕೋ ಅಷ್ಟು ಮಾಡಬೇಕು. ಇಷ್ಟೇ ಆಹಾರ, ಇಷ್ಟೇ ನಿದ್ರೆ ಎಂದು ವಿಧಿಸಲು ಆಗುವುದಿಲ್ಲ. ತಮ್ಮ ತಮ್ಮ ದೇಹಧರ್ಮಕ್ಕೆ ತಕ್ಕಂತೆ ಎಷ್ಟು ಆಹಾರ, ಎಷ್ಟು ನಿದ್ರೆಗಳಿಂದ ಧ್ಯಾನಯೋಗಕ್ಕೆ ಅಡ್ಡಿಯಾಗಲಾರದೋ ಅಷ್ಟನ್ನು ತಮ್ಮತಮ್ಮ ಅನುಭವದಿಂದ ನಿರ್ಧರಿಸಬೇಕಾಗುತ್ತದೆ. ಇಂತಹ ಯೋಗಾಭ್ಯಾಸ ಮಾಡಿದಾಗ ಅದು ದುಃಖವನ್ನು ಪರಿಹಾರ ಮಾಡುತ್ತದೆ. ಅಷ್ಟು ಮಾತ್ರವಲ್ಲ; ದುಃಖ ಸಂಬಂಧವೇ ಇಲ್ಲದಂತೆ ಮಾಡುತ್ತದೆ.

ಧ್ಯಾನಾಸಕ್ತನಾಗಿ ಭಗವಂತನ ದರ್ಶನ ಮಾಡುತ್ತಿರುವಾಗ ಅಂತಹ ಯೋಗಿಗೆ ಬೇರೆ ಯಾವ ಕರ್ತವ್ಯವೂ ಇಲ್ಲ. ಆ ಭಗವದ್ದರ್ಶನದಿಂದ ಉಂಟಾಗುವ ಸುಖವು ಮತ್ತೆ ಯಾವುದರಿಂದಲೂ ಆಗುವುದಿಲ್ಲ. ಆ ದರ್ಶನಭಾಗ್ಯವೇ ಮತ್ತೆಲ್ಲ ಸಾಧನೆಗಳ ಫಲರೂಪವಾದದ್ದು. ಇಂತಹ ಧ್ಯಾನಕಾಲದಲ್ಲಿ ಸಂಧ್ಯಾವಂದನಾದಿ ನಿತ್ಯಕರ್ಮಗಳ ಲೋಪವಾದರೂ

ದೋಷವಿಲ್ಲ. ಮೈಮೇಲೆ ಎಚ್ಚರವಿಲ್ಲದೇ ಹೀಗೆ ಧ್ಯಾನ ಮಾಡುತ್ತಿರುವಾಗ ಗುರುಗಳು ಬಂದರೂ ಸಹ ಧ್ಯಾನಯೋಗವನ್ನು ಬಿಟ್ಟು ಮೇಲೇಳಬೇಕಾದ್ದಿಲ್ಲ. ಆದ್ದರಿಂದ ತನ್ನ ಶಿಷ್ಯನಿಗೆ ಸಂಧ್ಯಾಕಾಲ ಬಂದಾಗ, ಅಥವಾ ದೊಡ್ಡವರು ಬಂದಾಗ ತನ್ನನ್ನು ಎಚ್ಚರಗೊಳಿಸು ಎಂದು ಹೇಳಬೇಕಾದ್ದಿಲ್ಲ. ಇಂತಹ ಅಸಂಪ್ರಜ್ಞಾತಸಮಾಧಿಯಿಂದ ಎಚ್ಚರಗೊಂಡ ಮೇಲೆ ಶ್ರೌತ,ಸ್ಮಾರ್ತಕರ್ಮಗಳನ್ನಾಗಲೀ ಗುರುವಂದನಾದಿಗಳನ್ನಾಗಲೀ ಬಿಡುವ ಹಾಗಿಲ್ಲ. ಮಾಡಲೇಬೇಕು.

ಧ್ಯಾನಯೋಗಿಗೆ ಕರ್ಮಾಚರಣೆಯು ಏಕೆಬೇಕು ಎಂದರೆ ಅದರ ವಿಶ್ಲೇಷಣೆ ಹೀಗಿದೆ. ಅಜ್ಞಾನದ ದೆಸೆಯಲ್ಲಿ ಸತ್‌ಕರ್ಮಾಚರಣೆ ಮಾಡಿದರೆ ಜ್ಞಾನೋದಯಕ್ಕೆ ಕಾರಣವಾಗುತ್ತದೆ. ಪರೋಕ್ಷಜ್ಞಾನಾನಂತರ ಮಾಡುವ ಸತ್ಕರ್ಮಾಚರಣೆಯು ಅಪರೋಕ್ಷಜ್ಞಾನಕ್ಕೆ ಕಾರಣವಾಗುತ್ತದೆ. ಅಪರೋಕ್ಷಜ್ಞಾನಾನಂತರ ಮಾಡುವ ಸತ್ಕರ್ಮಾಚರಣೆಯು ಮೋಕ್ಷದಲ್ಲಿ ಸುಖೋದ್ರೇಕಕ್ಕೆ ಕಾರಣವಾಗುತ್ತದೆ '.

ಹೀಗೆ ಶ್ರೀಕೃಷ್ಣನು ಉಪದೇಶ ಮಾಡಿದಾಗ ಅರ್ಜುನನು ಮತ್ತೆ ಪ್ರಶ್ನೆ ಮಾಡುತ್ತಾನೆ.'ಶ್ರೀಕೃಷ್ಣ! ಮನಸ್ಸು ಸ್ವಾಭಾವಿಕವಾಗಿ ಚಂಚಲ. ಬುದ್ಧಿಯನ್ನು ಅಲ್ಲೋಲಕಲ್ಲೋಲ ಮಾಡುವುದೇ ಅದರ ಸ್ವಭಾವ. ಬೀಸುವಗಾಳಿಯನ್ನು ಹಿಡಿಯುವುದು ಹೇಗೆ ಅಸಾಧ್ಯವೋ ಹಾಗೆ ಮನಸ್ಸನ್ನು ಬಿಗಿಹಿಡಿಯುವುದೂ ಸಹ ಅಸಾಧ್ಯ ಎಂದು ನನಗೆ ಅನ್ನಿಸುತ್ತದೆ'.

ಇದಕ್ಕೆ ಶ್ರೀಕೃಷ್ಣನು ಹೀಗೆನ್ನುತ್ತಾನೆ. 'ನೀನು ಹೇಳಿದ್ದು ಸತ್ಯ. ಮನಸ್ಸು ಚಂಚಲವಾದರೂ ಸಹ ಪ್ರತ್ಯಾಹಾರರೂಪವಾದ ಅಭ್ಯಾಸದಿಂದಲೂ ವೈರಾಗ್ಯದಿಂದಲೂ ಮನಸ್ಸನ್ನು ನಿಗ್ರಹ ಮಾಡಬಹುದು'.

ಮತ್ತೆ ಅರ್ಜುನನು ಪ್ರಶ್ನಿಸುತ್ತಾನೆ. 'ಯೋಗಾಭ್ಯಾಸವನ್ನು ಆರಂಭ ಮಾಡಿದವನು ಮಧ್ಯೆ ಯೋಗಭ್ರಷ್ಟನಾದರೆ ಅವನ ಗತಿ ಏನು? ಮೋಡವು ಹಾಕಿ ಮಳೆಯನ್ನು ಕೊಡದೇ ಹಾಗೇ ಚೆದುರಿ ಹೋದರೆ ಹೇಗೆ ವ್ಯರ್ಥವೋ ಹಾಗೆ ಅವನು ಆ ವರೆಗೆ ಮಾಡಿದ ಯೋಗಾಭ್ಯಾಸವು ನಷ್ಟವಾಗುತ್ತದೆಯೇ? ಈ ನನ್ನ ಸಂಶಯವನ್ನು ಪರಿಹಾರ ಮಾಡು'

ಹೀಗೆ ಕೇಳಿಕೊಂಡಾಗ ಶ್ರೀಕೃಷ್ಣನು ಅಭಯಪ್ರದಾನ ಮಾಡುತ್ತಾನೆ. ನನ್ನ ಭಕ್ತನು ಎಂದೂ ನಷ್ಟನಾಗುವುದಿಲ್ಲ. ವೈಷ್ಣವಯೋಗದಲ್ಲಿ ಸಂಕಲ್ಪ ಮಾಡಿದ್ದಕ್ಕೂ ಫಲವುಂಟು, ಆರಂಭ ಮಾಡಿದ್ದಕ್ಕೂ ಫಲವುಂಟು. ಮಧ್ಯೆ ಯೋಗಭ್ರಂಶವಾದ್ದರಿಂದ ದೋಷವು ಬರುವುದಿಲ್ಲ. ಸ್ವಲ್ಪಮಾತ್ರ ಭಾಗವತ ಧರ್ಮವನ್ನು ಮಾಡಿದರೂ ಅದು ಮಹಾನರಕಭಯಗಳಿಂದ ರಕ್ಷಣೆ ಮಾಡುತ್ತದೆ. ಯಜ್ಞಾದಿಗಳು ಮಾಡಿದಾಗ ಬರುವ ಪುಣ್ಯದಿಂದ ಸ್ವರ್ಗವನ್ನು ಪಡೆಯುವಂತೆ ಯೋಗಭ್ರಷ್ಟನೂ ಸ್ವರ್ಗವನ್ನು ಪಡೆಯುತ್ತಾನೆ. ಅಲ್ಲಿ ಹಲವು ಕಾಲ ಸುಖವನ್ನು ಅನುಭವಿಸಿ ಮತ್ತೆ ಭೂಮಿಗೆ ಬರುತ್ತಾನೆ. ಆಗ ನಿರ್ಮಲರಾದ ಶ್ರೀಮಂತರ ಗೃಹದಲ್ಲೋ, ಅಥವಾ ಯೋಗಿಗಳ ಕುಲದಲ್ಲೋ ಜನಿಸುತ್ತಾನೆ. ಹಿಂದಿನ ಅಭ್ಯಾಸದಿಂದ ಮತ್ತೆ ಯೋಗಾಭ್ಯಾಸದಲ್ಲಿ ತೊಡಗುತ್ತಾನೆ. ಹಿಂದಿನ ಯೋಗಾಭ್ಯಾಸವನ್ನೇ ಮುಂದುವರೆಸುತ್ತಾನೆ.

ಹೀಗೆ ತನ್ನ ಯೋಗ್ಯತೆಗೆ ತಕ್ಕಂತೆ ಅನೇಕಜನ್ಮಗಳಲ್ಲಿ ಸಾಧನೆ ಮಾಡಿ ಜ್ಞಾನಸಿದ್ಧಿಯನ್ನು ಪಡೆಯುತ್ತಾನೆ. ಆದರಿಂದ ಉತ್ತಮಗತಿಯನ್ನು ಪಡೆಯುತ್ತಾನೆ. ಇಂತಹ ಧ್ಯಾನಯೋಗಿಯು ಯಜ್ಞಾದಿಕರ್ಮಗಳನ್ನು ಮಾಡತಕ್ಕವರು, ಕೃಚ್ಛ್ರ, ಚಾಂದ್ರಾಯಣಾದಿ ತಪಸ್ಸು ಮಾಡತಕ್ಕವರು, ಧ್ಯಾನ ಮಾಡದ ಜ್ಞಾನಿಗಳು ಇವರೆಲ್ಲರಿಗಿಂತಲೂ ಶ್ರೇಷ್ಠ. ಆದ್ದರಿಂದ ನೀನೂ ಸಹ ಅಂತಹ ಯೋಗಿಯಾಗು'.

ಹೀಗೆ ಈ ಅಧ್ಯಾಯದಲ್ಲಿ ಜ್ಞಾನಕ್ಕೆ ಅಂತರಂಗಸಾಧನೆಯಾದ ಧ್ಯಾನಯೋಗವನ್ನು ಭಗವಂತನು ಉಪದೇಶಿಸಿದ್ದಾನೆ.

## ಸಪ್ತಮಾಧ್ಯಾಯಸಾರ

ಹಿಂದಿನ ಆರು ಅಧ್ಯಾಯಗಳಲ್ಲಿ ಪ್ರಧಾನವಾಗಿ ಜ್ಞಾನೋಪಾಯವನ್ನು ಹೇಳಲಾಗಿದೆ. ಮುಂದಿನ ಆರು

ಅಧ್ಯಾಯಗಳಲ್ಲಿ ಪ್ರಧಾನವಾಗಿ ಜ್ಞಾನದ ಉಪದೇಶ ಮಾಡಲಾಗಿದೆ. ಆರಂಭಕ್ಕೆ ಶ್ರೀಕೃಷ್ಣನು 'ಹೇ! ಅರ್ಜುನ, ನಿನ್ನ ಯೋಗ್ಯತೆಯು ಎಷ್ಟಿದೆಯೋ ಅಷ್ಟೂ ಜ್ಞಾನವನ್ನು ನಿನಗೋಸ್ಕರ ಹೇಳುತ್ತೇನೆ' ಎಂದು ಪ್ರತಿಜ್ಞೆ ಮಾಡಿ ತಾನು ಉಪದೇಶ ಮಾಡಲಿರುವ ಜ್ಞಾನವನ್ನು ಪ್ರಶಂಸೆ ಮಾಡುತ್ತಾನೆ.

ಹೇ! ಅರ್ಜುನ, ನಾನು ಮಾಡುವ ಉಪದೇಶವನ್ನು ತಿಳಿದ ಮೇಲೆ ನಿನಗೆ ತಿಳಿಯಬೇಕಾದ್ದು ಏನೂ ಇರುವುದಿಲ್ಲ. ಈ ಜ್ಞಾನಸಂಪಾದನೆಯು ದುರ್ಲಭ. ಸಹಸ್ರಾರು ಮನುಷ್ಯರಲ್ಲಿ ಯಾರೋ ಒಬ್ಬನು ಜ್ಞಾನಸಿದ್ಧಿಗೋಸ್ಕರ ಪ್ರಯತ್ನ ಮಾಡುತ್ತಾನೆ. ಪ್ರಯತ್ನಮಾಡಿದ ಸಹಸ್ರಾರುಜನರಲ್ಲಿ ಯಾರೋ ಒಬ್ಬನು ಸಿದ್ಧಿಯನ್ನು ಪಡೆಯುತ್ತಾನೆ. ಆ ಸಿದ್ಧಪುರುಷರಲ್ಲೂ ನನ್ನಲ್ಲೇ ಆಸಕ್ತರಾದ ಮಹಾತ್ಮನು ಮತ್ತೂ ದುರ್ಲಭ.

ಹೀಗೆ ಪ್ರಶಂಸೆ ಮಾಡಿ ಮೊದಲಿಗೆ ಜ್ಞಾನೋಪದೇಶವನ್ನು ಮಾಡುತ್ತಾನೆ. ನನ್ನ ಅಧೀನವಾದ ಜಡಪ್ರಕೃತಿಯಲ್ಲಿ ಎಂಟು ಭೇದವಿದೆ. ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ ಮತ್ತು ಅಹಂಕಾರ ಎಂದು. ಆ ಜಡಪ್ರಕೃತಿಯಿಂದ ಭಿನ್ನವಾದ ಈ ಪ್ರಕೃತಿಗೆ ಅಭಿಮಾನಿಯಾದ ಚಿತ್‌ಪ್ರಕೃತಿ ಎಂದು ಕರೆಸತಕ್ಕ ರಮಾದೇವಿಯೂ ಸಹ ನನ್ನ ಅಧೀನ. ಆ ರಮಾದೇವಿಯು ಜಗತ್ತನ್ನೇ ಧಾರಣೆ ಮಾಡಿದ್ದಾರೆ. ಎಲ್ಲ ಜೀವಿಗಳ ಶರೀರಕ್ಕೂ ಜಡಪ್ರಕೃತಿಯು ಉಪಾದಾನಕಾರಣ. ಚಿತ್‌ಪ್ರಕೃತಿಯು ನಿಮಿತ್ತಕಾರಣ. ನಾನೇ ಸ್ವತಂತ್ರಕಾರಣ. ಸಮಸ್ತಜಗತ್ತಿನ ಸೃಷ್ಟಿ-ಲಯಗಳಿಗೆ ನಾನೇ ಕಾರಣನಾಗಿದ್ದೇನೆ.

ಬ್ರಹ್ಮಾದಿಚೇತನರು,ಅಪರ ಅಥವಾ ಅವರ ಎಂದು ಕರೆಸಿಕೊಳ್ಳುತ್ತಾರೆ. ಲಕ್ಷ್ಮೀದೇವಿಯು ಪರಶಬ್ದವಾಚ್ಯಳು. ಇಂತಹ ಲಕ್ಷ್ಮೀದೇವಿಗಿಂತ ಉತ್ತಮನಾದ ನನಗೆ ಪರತರ ಎಂದು ಹೆಸರು. ಇನ್ನೊಂದು ದೃಷ್ಟಿಯಿಂದ ಹೇಳುವಾಗ ಅಮುಕ್ತರಿಗೆ ಅಪರ ಎಂದು ಹೆಸರು. ಮುಕ್ತರಿಗೆ ಪರ ಎಂದು ಹೆಸರು. ಮುಕ್ತಾಮುಕ್ತರನ್ನು ಮೀರಿದ ನನಗೆ ಪರತರ ಎಂದು ಹೆಸರು. ನನ್ನನ್ನು ಬಿಟ್ಟು ಪರತರವಾದ ವಸ್ತು ಬೇರಾವುದೂ ಇಲ್ಲ.

ಮುಂದೆ ವಿಜ್ಞಾನವನ್ನು ಉಪದೇಶಿಸುತ್ತಾನೆ. ನೀರಿನಲ್ಲಿರುವ ರಸವು ನಾನೇ ಆಗಿದ್ದೇನೆ. ಎಂದರೆ ನೀರಿನ ಸಾರಭೂತವಾದ ಧರ್ಮ ರಸ. ನೀರು ಮಾತ್ರ ನನ್ನ ಅಧೀನವಲ್ಲ, ನೀರಿನ ರಸವೂ ನನ್ನ ಅಧೀನ ಎಂದು ಅರ್ಥ. ನೀರಿನ ಅಭಿಮಾನಿದೇವತೆಗಳು ರಸಾಭಿಮಾನಿದೇವತೆಗಳ ಅಧೀನರಾಗಿದ್ದಾರೆ. ನೀರಿನಲ್ಲಿ ನನ್ನ ಉಪಾಸನೆಗಿಂತ ರಸದಲ್ಲಿ ನನ್ನ ಉಪಾಸನೆ ಇನ್ನೂ ಶ್ರೇಷ್ಠ. ಇದರಂತೆ ಮುಂದೆಯೂ ಅರ್ಥ ತಿಳಿಯಬೇಕು. ಅಗ್ನಿಯಲ್ಲಿರುವ ತೇಜಸ್ಸು ನಾನೇ. ಮನುಷ್ಯರಲ್ಲಿರುವ ಪೌರುಷವು ನಾನೇ. ಭೂಮಿಯಲ್ಲಿರುವ ಪುಣ್ಯಗಂಧವು ನಾನೇ.

ಯದ್ಯಪಿ ಸುಗಂಧ-ದುರ್ಗಂಧ ಎರಡೂ ದೇವರ ಅಧೀನವೇ. ಆದರೂ ಭಗವಂತನ ಚಿಂತನೆಯನ್ನು ಒಳ್ಳೆಯ ಪದಾರ್ಥಗಳಲ್ಲೇ ಮಾಡಬೇಕು ಎಂಬ ದೃಷ್ಟಿಯಿಂದ ಪುಣ್ಯಗಂಧ ಎಂದು ಹೇಳಿದೆ.

ಆದರಂತೆ ಧರ್ಮಾವಿರುದ್ಧವಾದ ಕಾಮದಲ್ಲಿ ನನ್ನನ್ನು ಚಿಂತಿಸಬೇಕು. ಎಲ್ಲಿ ಪ್ರಯೋಗ ಮಾಡಬಾರದೋ ಅಲ್ಲಿ ಪ್ರಯೋಗ ಮಾಡದೇ ಇರುವ ಬಲದಲ್ಲಿ ನನ್ನನ್ನು ಚಿಂತಿಸಬೇಕು. ಆಕಾಶದಲ್ಲಿ ಇರುವ ಶಬ್ದವೂ ನಾನೇ. ಎಲ್ಲವೇದಗಳಲ್ಲಿ ಶ್ರೇಷ್ಠವಾದ ಪ್ರಣವಪ್ರತಿಪಾದ್ಯನೂ ನಾನೇ. ಹೀಗೆ ಒಂದೊಂದು ಹೇಳುವುದೇನು? ಸಾತ್ವಿಕ,ರಾಜಸ, ತಾಮಸ ಎಂಬ ತ್ರಿವಿಧ ಪದಾರ್ಥಗಳೂ ಸಹ ನನ್ನಿಂದಲೇ ಇರತಕ್ಕಂತಹವು. ಅವುಗಳು ನನ್ನ ಅಧೀನವೇ ಹೊರತಾಗಿ ನಾನು ಅವುಗಳ ಅಧೀನ ಅಲ್ಲ.

ತ್ರಿಗುಣಮಯವಾದ ಪದಾರ್ಥಗಳನ್ನೇ ನೋಡಿರುವ ಜನಗಳು ಮೋಹಿತರಾಗಿ ನನ್ನ ದೇಹವೂ ಸಹ ತ್ರಿಗುಣಾತ್ಮಕವೆಂದು ತಿಳಿಯುತ್ತಾರೆ. ಇದಕ್ಕೆ ಮೂಲಕಾರಣ ಅವರ ಆಸುರಸ್ವಭಾವ. ನನಗೆ ತ್ರಿಗುಣಸಂಬಂಧವಿಲ್ಲವೆಂದು

ಯಾವ ಸಜ್ಜನರು ತಿಳಿಯುತ್ತಾರೋ ಅವರೂ ಸಹ ತ್ರಿಗುಣಸಂಬಂಧವನ್ನು ಕಳೆದುಕೊಂಡು ಮುಕ್ತರಾಗುತ್ತಾರೆ.

ನನ್ನ ಭಕ್ತರು ನಾಲ್ಕು ಬಗೆ ಇದ್ದಾರೆ.

1. ಆರ್ತಭಕ್ತರು. ಎಂದರೆ ರೋಗ, ಬಡತನ ಮೊದಲಾದ್ದರಿಂದ ಬಳಲಿ ಅದರ ಪರಿಹಾರಕ್ಕೋಸ್ಕರ ನನ್ನನ್ನು ಭಜನೆ ಮಾಡುತ್ತಾರೆ.

2. ಅರ್ಥಾರ್ಥಿಭಕ್ತರು. ಪತ್ನಿ, ಪುತ್ರ, ಮನೆ, ದುಡ್ಡು ಮೊದಲಾದ್ದನ್ನು ಭಜಿಸಿ ನನ್ನನ್ನು ಭಜನೆ ಮಾಡುತ್ತಾರೆ.

3.ಜಿಜ್ಞಾಸುಭಕ್ತರು. ಜ್ಞಾನಾಪೇಕ್ಷಿಗಳಾಗಿ ನನ್ನನ್ನು ಭಜನೆ ಮಾಡತಕ್ಕವರು.

4. ಜ್ಞಾನಿಗಳು. ಜ್ಞಾನಸಿದ್ಧಿಯನ್ನು ಪಡೆದು ಮತ್ತೂ ನನ್ನ ಅನುಗ್ರಹಕ್ಕೋಸ್ಕರ ನನ್ನನ್ನು ಭಜನೆ ಮಾಡುತ್ತಾರೆ. ಇವರಪೈಕಿ ಜ್ಞಾನಿಭಕ್ತನು ನನಗೆ ಅತ್ಯಂತಪ್ರಿಯ. ಜ್ಞಾನಿಗೆ ನಾನೂ ಸಹ ಅತ್ಯಂತ ಪ್ರಿಯನಾಗಿದ್ದೇನೆ.

ದೇವತೆಗಳನ್ನು ಭಜನೆ ಮಾಡಿದಾಗ ಬೇಗ ಫಲವು ಸಿಗುತ್ತದೆ. ಇದರಿಂದ ಶ್ರದ್ಧೆ ಹುಟ್ಟಿ ದೇವತೆಗಳನ್ನೇ ಆರಾಧನೆ ಮಾಡುತ್ತಾರೆ. ಅವರು ಅಲ್ಪ, ಅಸ್ಥಿರವಾದ ಫಲಗಳನ್ನೇ ಪಡೆಯುತ್ತಾರೆ. ನನ್ನನ್ನು ಭಜನೆ ಮಾಡತಕ್ಕವರು ಮಹತ್ತರವಾದ ಸ್ಥಿರವಾದ ಫಲವನ್ನು ಪಡೆಯುತ್ತಾರೆ. ಆದ್ದರಿಂದ ನನ್ನ ಭಜನೆಯೇ ಶ್ರೇಷ್ಠವಾದದ್ದು. ದೇವತೆಗಳ ಭಕ್ತರು ದೇವತೆಗಳನ್ನು ಹೊಂದಿದರೆ ನನ್ನ ಭಕ್ತರು ನನ್ನನ್ನೇ ಹೊಂದುತ್ತಾರೆ.

ಬ್ರಹ್ಮ , ಕರ್ಮ, ಅಧ್ಯಾತ್ಮ, ಅಧಿಭೂತ, ಅಧಿದೈವ, ಅಧಿಯಜ್ಞ ಇವೆಲ್ಲರ ಸಮೇತವಾಗಿ ಯಾರು ನನ್ನನ್ನು ಪ್ರಯಾಣಕಾಲದಲ್ಲಿಯೂ ಸಹ ತಿಳಿಯುತ್ತಾರೋ ಅವರೇ ಸರಿಯಾದ ತಿಳಿಯುತ್ತಾರೋ ಅವರೇ ಸರಿಯಾದ ಜ್ಞಾನಿಗಳು. ಅಂತಹವರು ನನ್ನನ್ನು ಹೊಂದುತ್ತಾರೆ.

## ಅಷ್ಟಮಾಧ್ಯಾಯಸಾರ

ಹೀಗೆ ಉಪದೇಶವನ್ನು ಕೇಳಿದ ಅರ್ಜುನರು ವಿಶೇಷಜ್ಞಾನಕ್ಕಾಗಿ ಮತ್ತೆ ಪ್ರಶ್ನೆ ಮಾಡುತ್ತಾರೆ.

ಹೇ! ಪುರುಷೋತ್ತಮ, 'ಬ್ರಹ್ಮ' ಎಂದರೇನು? 'ಕರ್ಮ' ಎಂದರೇನು ? 'ಅಧ್ಯಾತ್ಮ' ಎಂದರೇನು ? 'ಅಧಿಭೂತ' ಎಂದು ಯಾವುದಕ್ಕೆ ಕರೆಯುತ್ತಾರೆ ? ಅಧಿದೈವವು ಯಾರು? ಅಧಿಯಜ್ಞನು ಯಾರು? ಆ ಅಧಿಯಜ್ಞನು ದೇಹದಲ್ಲಿ ಯಾವ ರೀತಿ ಇದ್ದಾನೆ? ಪ್ರಯಾಣಕಾಲದಲ್ಲಿ ನಿನ್ನನ್ನು ಹೇಗೆ ಚಿಂತಿಸಬೇಕು?

ಹೀಗೆ ಅರ್ಜುನರು ಪ್ರಾರ್ಥಿಸಿದಾಗ ಭಗವಂತನು ಅವರಿಗೆ ಏಳು ವಿಷಯಗಳನ್ನು ಸ್ಪಷ್ಟಪಡಿಸುತ್ತಾನೆ.

'ಬ್ರಹ್ಮ' ಎಂದರೆ ನಾಶರಹಿತನಾದ್ದರಿಂದ 'ಅಕ್ಷರ' ಎಂದು ಕರೆಸತಕ್ಕ ಗುಣಪೂರ್ಣನಾದ ಭಗವಂತನೇ ಆಗಿದ್ದಾನೆ.'ಕರ್ಮ' ಎಂದರೆ ಭಗವಂತನು ಮಾಡುವ ಸೃಷ್ಟಿ ಮೊದಲಾದ ವ್ಯಾಪಾರ. 'ಅಧ್ಯಾತ್ಮ ' ಎಂದರೆ ಜೀವ. 'ಅಧಿಭೂತ' ಎಂದರೆ ಜೀವನಿಗೆ ಉಪಕಾರಕವಾಗಿರುವ ದೇಹವನ್ನು ಆರಂಭಿಸಿ ಪ್ರಕೃತಿಪರ್ಯಂತ ಇರುವ ಜಡವಸ್ತುಗಳು. 'ಅಧಿದೈವ' ಎಂದರೆ ದೇವತೆಗಳಲ್ಲಿ ಅಧಿಕನಾದ ಶೇಷ ಅಥವಾ ಬ್ರಹ್ಮದೇವರು. ಅಧಿಯಜ್ಞನು ನಾನೇ. ಎಲ್ಲಾ ಜೀವಿಗಳ ದೇಹಗಳಲ್ಲಿ ಪ್ರೇರಕನಾಗಿದ್ದೇನೆ.

ಹೀಗೆ ಬ್ರಹ್ಮಾದಿ ಆರರ ಸ್ವರೂಪವನ್ನು ಶ್ರೀಕೃಷ್ಣನು ಸ್ಪಷ್ಟಪಡಿಸಿ ಪ್ರಯಾಣಕಾಲದಲ್ಲಿ ಹೇಗೆ ಚಿಂತಿಸಬೇಕೆಂಬ ಏಳನೆಯ ಪ್ರಶ್ನೆಗೆ ಉತ್ತರಕೊಡುವ ಮೊದಲು ಒಂದು ಸಾಮಾನ್ಯನಿಯಮವನ್ನು ಹೇಳುತ್ತಾನೆ.

ಅಂತ್ಯಕಾಲದಲ್ಲಿ ಏನೇನನ್ನು ಸ್ಮರಣೆ ಮಾಡುತ್ತಾ ದೇಹವನ್ನು ಬಿಡುತ್ತಾರೋ ಆ ರೂಪವನ್ನೇ ಮುಂದಿನ ಜನ್ಮದಲ್ಲಿ ಪಡೆಯುತ್ತಾರೆ. ಆದ್ದರಿಂದ ನನ್ನನ್ನು ಪಡೆಯಲು ಇಚ್ಛಿಸುವವರು ಅಂತ್ಯಕಾಲದಲ್ಲಿ ನನ್ನ ಸ್ಮರಣೆಯನ್ನು ಮಾಡಬೇಕು.

ಇದಕ್ಕಾಗಿ ನಿರಂತರವೂ ನನ್ನನ್ನು ಚಿಂತಿಸುತ್ತಿರಬೇಕು. ಇದರಿಂದ ಉಂಟಾದ ಮಾನಸಿಕವಾಸನೆಯಿಂದ ಅಂತ್ಯಕಾಲದಲ್ಲಿ ನನ್ನ ಸ್ಮರಣೆ ಮಾಡುವ ಸಂಭವವಿದೆ.

ಧ್ಯೇಯವಾದ ನನ್ನ ಸ್ವರೂಪ ಹೀಗಿದೆ. ನಾನು ಸರ್ವಜ್ಞ,ಸನಾತನ ಪುರುಷ , ಜೀವರನ್ನು ಕರೆದುಕೊಂಡು ಒಂದುದೇಹದಿಂದ ಮತ್ತೊಂದು ದೇಹಕ್ಕೆ ಹೋಗತಕ್ಕವನು, ಸರ್ವದಾ ಪ್ರೇರಕ, ಅಣುವಿಗೆ ಅಣುವಾಗಿದ್ದೇನೆ, ಎಲ್ಲರಿಗೂ ಸೃಷ್ಟಿಕರ್ತಾ, ಧಾರಕ, ಪೋಷಕ, ಸಂಪೂರ್ಣವಾಗಿ ಚಿಂತಿಸಲು ಅಶಕ್ಯನು, ಆಗ ತಾನೇ ಹುಟ್ಟುವ ಸೂರ್ಯನಂತೆ ಕಾಂತಿವುಳ್ಳವನು, ಮೂರುಗುಣವನ್ನು ಮೀರಿದವನು, ನನ್ನ ಸ್ವರೂಪವನ್ನು ಹೊಂದುವುದಕ್ಕೋಸ್ಕರ ಬ್ರಹ್ಮಚರ್ಯವ್ರತವನ್ನು ಮಾಡುತ್ತಾರೆ. ಜ್ಞಾನಾದಿತಪಸ್ಸನ್ನು ಮಾಡುತ್ತಾರೆ.

ಪ್ರಯಾಣಕಾಲವು ಬಂದಾಗ ನಿಶ್ಚಂಚಲಮನಸ್ಸಿನಿಂದ ನನ್ನನ್ನು ಚಿಂತಿಸುತ್ತಾ ಪ್ರಾಣವಾಯುವನ್ನು ಉದಾನಮಾರ್ಗದಿಂದ ಸುಷುಮ್ನಾನಾಡಿಯ ಮೂಲಕ ನೆತ್ತಿಗೆ ಏರಿಸಬೇಕು. ಗುಣಪೂರ್ಣನಾದ ನನ್ನನ್ನು ಹೇಳುವ ಪ್ರಣವವನ್ನುಉಚ್ಚರಿಸುತ್ತಾ ನನ್ನಸ್ಮರಣೆ ಮಾಡುತ್ತಾ ದೇಹ ಬಿಡಬೇಕು. ಹೀಗೆ ದೇಹ ಬಿಡತಕ್ಕವರು ಪುನರಾವೃತ್ತಿರಹಿತವಾದ ಲೋಕಕ್ಕೆ ಹೋಗುತ್ತಾರೆ. ಮೇರುಪರ್ವತದಲ್ಲಿರುವ ಬ್ರಹ್ಮಸದನಕ್ಕಿಂತ, ಜನೋಲೋಕಕ್ಕಿಂತ ಮೇಲೆ ಹೋದವರಿಗೆ ಪುನರಾವೃತ್ತಿ ಇಲ್ಲ.

ಬ್ರಹ್ಮದೇವರ ನೂರುವರ್ಷಪರಿಮಿತವಾದ ಪರಕಾಲ ಎಂಬುವುದು ಪರಬ್ರಹ್ಮನಿಗೆ ಹಗಲು ಎನಿಸುತ್ತದೆ. ಇಷ್ಟರಲ್ಲಿ ಸಹಸ್ರಾರುಚತುರ್ಯುಗಗಳು ಕಳೆದುಹೋಗುತ್ತವೆ. ಇಷ್ಟೇದೀರ್ಘಕಾಲವಾದದ್ದು ಪರಬ್ರಹ್ಮನ ರಾತ್ರಿ. ಇಂತಹ ಪರಬ್ರಹ್ಮನ ಹಗಲು ಬಂದಾಗ ಜೀವಿಗಳು ಸೃಷ್ಟಿಗೆ ಬರುತ್ತಾರೆ. ರಾತ್ರಿಯು ಬಂದಾಗ ಎಲ್ಲರೂ ಭಗವಂತನ ಉದರವನ್ನು ಪ್ರವೇಶ ಮಾಡುತ್ತಾರೆ.

ಯೋಗಿಗಳು ದೇಹವನ್ನು ಬಿಟ್ಟು ಪ್ರಯಾಣ ಮಾಡುವ ಮಾರ್ಗಗಳು ಎರಡು ಇವೆ. ಪ್ರವೃತ್ತಿಮಾರ್ಗ, ನಿವೃತ್ತಿ ಮಾರ್ಗ ಎಂಬುದಾಗಿ. ಪ್ರವೃತ್ತಿಮಾರ್ಗವನ್ನೇ ಧೂಮಾದಿಮಾರ್ಗ ಎನ್ನುತ್ತಾರೆ. ಈ ಮಾರ್ಗದಲ್ಲಿ ಹೋಗುವವರು ಧೂಮ ದೇವತೆ, ರಾತ್ರಿದೇವತೆ, ಕೃಷ್ಣಪಕ್ಷದ ದೇವತೆ, ದಕ್ಷಿಣಾಯನದ ಆರು ಮಾಸದ ದೇವತೆಗಳು, ದಕ್ಷಿಣಾಯನದ ದೇವತೆ ಇವರುಗಳ ಲೋಕದ ಮೂಲಕ ಸ್ವರ್ಗಲೋಕದ ಏಕದೇಶವಾದ ಚಂದ್ರಲೋಕಕ್ಕೆ ಹೋಗಿ ಅಲ್ಲಿ ಪುಣ್ಯವನ್ನು ಅನುಭವಿಸಿ ಮತ್ತೆ ಭೂಮಿಯಲ್ಲಿ ಹಿಂತಿರುಗುತ್ತಾರೆ.

ನಿವೃತ್ತಿಮಾರ್ಗವನ್ನೇ ಅರ್ಚಿರಾದಿ ಮಾರ್ಗ ಎನ್ನುತ್ತಾರೆ. ಈ ಮಾರ್ಗದಲ್ಲಿ ಹೋಗುವವರು ಅಗ್ನಿದೇವತೆ, ಜ್ಯೋತಿರ್ದೇವತೆ, ಹಗಲಿನದೇವತೆ, ಶುಕ್ಲಪಕ್ಷದದೇವತೆ, ಉತ್ತರಾಯಣದಆರುಮಾಸದದೇವತೆಗಳು, ಉತ್ತರಾಣಯದ ದೇವತೆ ಇವರುಗಳ ಲೋಕದ ಮೂಲಕ ಧ್ರುವಲೋಕಕ್ಕೆ ಹೋಗಿ ಅಲ್ಲಿಂದ ದ್ಯುನಾಮಕಭಾರತೀದೇವಿಯರಲ್ಲಿಗೆ ಹೋಗಿ ಅವರ ಅಪ್ಪಣೆ ಪಡೆದು ವಾಯುದೇವರ ಬಳಿಗೆ ಹೋಗುತ್ತಾರೆ. ವಾಯುದೇವರು ಹೀಗೆ ತಮ್ಮಲ್ಲಿ ಬಂದ ಯೋಗಿಗಳ ಯೋಗ್ಯತೆಗೆ ತಕ್ಕಂತೆ ಬ್ರಹ್ಮಲೋಕಕ್ಕೋ, ಅಮುಕ್ತ ವೈಕುಂಠ ಲೋಕಕ್ಕೋ ಒಯ್ಯುತ್ತಾರೆ. ಈ ಮಾರ್ಗದಲ್ಲಿ ಹೋದವರು ಹಿಂತಿರುಗುವುದಿಲ್ಲ.

ಪಿತೃಯಾನ, ದೇವಯಾನ ಎಂದೂ ಸಹ ಕರೆಸತಕ್ಕ ಈ ಮೇಲಿನ ಎರಡು ಮಾರ್ಗಗಳು ಶಾಶ್ವತವಾದವು. ಇಂತಹ ಎರಡು ಮಾರ್ಗಗಳನ್ನು ತಿಳಿದು ಪ್ರಯಾಣಕಾಲದಲ್ಲಿ ಇವುಗಳನ್ನು ಚಿಂತಿಸುವ ಯೋಗಿಗೆ ಯಾವ ಮೋಹವೂ ಉಳಿಯುವುದಿಲ್ಲ.

## ನವಮಾಧ್ಯಾಯಸಾರ

ಭಗವಂತನು ಉಪದೇಶವನ್ನು ಮುಂದುವರೆಸುತ್ತಾನೆ. ಹೇ! ಅರ್ಜುನ, ಜ್ಞಾನ, ವಿಜ್ಞಾನಸಹಿತವಾದ ಗೋಪ್ಯವಾದ ವಿಷಯವನ್ನು ಹೇಳುತ್ತೇನೆ. ಕೇಳು.

ಇದು ಶ್ರೇಷ್ಠವಾದ ವಿದ್ಯೆ. ಶ್ರೇಷ್ಠವಾದ ರಹಸ್ಯ. ಪವಿತ್ರವಾದದ್ದು. ಧಾರಕ, ಪೋಷಕನಾದ್ದರಿಂದ ಧರ್ಮ ಎಂದು ಕರೆಸತಕ್ಕ ಭಗವಂತನ ಸಂಬಂಧಿಯಾದದ್ದು. ಈ ವಿದ್ಯೆಯು ಪ್ರತಿಯೊಂದು ಇಂದ್ರಿಯದಲ್ಲೂ ಪ್ರೇರಕನಾಗಿರುವುದರಿಂದ ಪ್ರತ್ಯಕ್ಷ ಎನಿಸತಕ್ಕ ಭಗವಂತನನ್ನು ಹೊಂದಿಸತಕ್ಕದ್ದು.

ನಾನು ಉಪದೇಶ ಮಾಡುವ ಈ ವಿದ್ಯೆಯನ್ನು ಯಾರು ನಂಬುವುದಿಲ್ಲವೋ ಅವರು ನನ್ನನ್ನು ಹೊಂದಲು ಸಾಧ್ಯವಿಲ್ಲ. ಅವರು ಮತ್ತೆಮತ್ತೆ ಜನನ, ಮರಣ ರೂಪವಾದ ಸಂಸಾರದಲ್ಲಿ ತಿರುಗುತ್ತಾರೆ.

ನಾನು ಜಗತ್ತಿನಲ್ಲೆಲ್ಲಾ ವ್ಯಾಪಿಸಿದ್ದೇನೆ. ಆದರೆ ಅತಿಸೂಕ್ಷ್ಮನಾದ್ದರಿಂದ ಅವ್ಯಕ್ತನಾಗಿದ್ದೇನೆ. ಎಲ್ಲಕಡೆ ನಾನಿದ್ದರೂ ನನ್ನಲ್ಲಿ ಎಲ್ಲ ಪದಾರ್ಥಗಳು ಆಶ್ರಯ ಮಾಡಿಕೊಂಡಿದ್ದರೂ ಸಹ ನನಗೆ ಅವುಗಳ ಲೇಪವಿಲ್ಲ. ಹೇಗೆ ಎಲ್ಲ ಕಡೆ ಇರುವ ಆಕಾಶದಲ್ಲಿ ವಾಯು ಮೊದಲಾದ ಪದಾರ್ಥಗಳಿದ್ದರೆ ಅವುಗಳ ಧರ್ಮಗಳು ಆಕಾಶಕ್ಕೆ ಲೇಪವಾಗುವುದಿಲ್ಲವೋ ಅದರಂತೆ ನಾನೂ ನಿರ್ಲಿಪ್ತ.

ನನ್ನ ಅಧೀನರಾದ ಲಕ್ಷ್ಮೀದೇವಿಯಿಂದ ಸಹಿತನಾಗಿ ನನ್ನ ಅಧೀನವಾದ ಜಡಪ್ರಕೃತಿಯಲ್ಲೇ ಪ್ರವೇಶಿಸಿ ನಾನೇ ಜಗತ್ತನ್ನು ಸೃಷ್ಟಿಸುತ್ತೇನೆ. ನಾನು ಅಧ್ಯಕ್ಷನಾಗಿದ್ದು ಪ್ರಕೃತಿಯು ಚರಾಚರ ಜಗತ್ತನ್ನು ಸೃಷ್ಟಿಸುವಂತೆ ಮಾಡುತ್ತೇನೆ. ಮತ್ತೆ ಪ್ರಳಯಕಾಲವು ಬಂದಾಗ ಪ್ರಕೃತಿಯಲ್ಲೇ ಎಲ್ಲವೂ ಲೀನವಾಗುತ್ತದೆ. ಇಂತಹ ಮಹಾಮಹಿಮೆವುಳ್ಳವನಾಗಿದ್ದರೂ ಸಹ ಮನುಷ್ಯನಂತೆ ಕಾಣುವ ನನ್ನ ಶರೀರವನ್ನು ನೋಡಿ ಮೂಢರು ನನ್ನನ್ನು ಅವಮಾನ ಮಾಡುತ್ತಾರೆ. ಅಂತವಾದ ಆಶೆಗಳು, ಕರ್ಮಗಳು,ಜ್ಞಾನ ಎಲ್ಲವೂ ವ್ಯರ್ಥವಾಗುತ್ತವೆ. ಇದಕ್ಕೆಲ್ಲ ಮೂಲಕಾರಣ ಅವರ ಆಸುರಸ್ವಭಾವ. ಇದಕ್ಕೆ ವಿರುದ್ಧವಾಗಿ ದೈವಸ್ವಭಾವವುಳ್ಳ ಮಹಾತ್ಮರು ನಾನೇ ಎಲ್ಲಕ್ಕೂ ಆದಿ ಎಂದು ತಿಳಿದು ನನ್ನನ್ನು ಅನನ್ಯಮನಸ್ಸಿನಿಂದ ಭಜಿಸುತ್ತಾರೆ.

ಜ್ಞಾನರೂಪಿಯಾದ್ದರಿಂದ ನನಗೆ ಕ್ರತು ಎಂದು ಹೆಸರು. ಪೂಜ್ಯನಾದ್ದರಿಂದ ಯಜ್ಞ ಎನ್ನುತ್ತಾರೆ. ಸುಖವನ್ನು ಧರಿಸುವುದರಿಂದ ಸ್ವಧಾ ಎನ್ನುತ್ತಾರೆ. ಸಂಸಾರತಪ್ತರಿಗೆ ಆಶ್ರಯನಾದ್ದರಿಂದ 'ಔಷಧ' ಎನ್ನುತ್ತಾರೆ. ಸ್ವತಃ ಚಲನೆ ಇಲ್ಲದ ಜಗತ್ತನ್ನು ನಯನ ಮಾಡುವುದರಿಂದ 'ಅಗ್ನಿ' ಎನ್ನುತ್ತಾರೆ. ಅತ್ಯಂತಶ್ರೇಷ್ಠನಾದ್ದರಿಂದ 'ಆಜ್ಯ'ಎನ್ನುತ್ತಾರೆ.

ಯಜ್ಞದಲ್ಲಿ ಆಹೂತನಾದ್ದರಿಂದ 'ಹುತ' ಎನ್ನುತ್ತಾರೆ. ಜಗತ್ತನ್ನು ಸೃಷ್ಟಿಸಿದ್ದರಿಂದ 'ಪಿತಾ' ಎನ್ನುತ್ತಾರೆ. ಎಲ್ಲವನ್ನೂ ತಿಳಿದಿದ್ದರಿಂದ 'ಮಾತಾ' ಎನ್ನುತ್ತಾರೆ. ಬ್ರಹ್ಮನಲ್ಲಿ ಅಂತರ್ಯಾಮಿಯಾದ್ದರಿಂದ 'ಪಿತಾಮಹ' ಎನ್ನುತ್ತಾರೆ. ನಾನೇ ಸಮಸ್ತವೇದವೇದ್ಯನು. ಪಾವನಗೊಳಿಸುವವನು. 'ಓಂ' ಎಂಬುದಾಗಿ ಕರೆಯಲ್ಪಡುವವನು. ಅರ್ಚಿಸಲು ಯೋಗ್ಯನಾದ್ದರಿಂದ 'ಋಕ್' ಎಂದು, ಯಜನ ಮಾಡಲು ಯೋಗ್ಯನಾದ್ದರಿಂದ 'ಯಜುಸ್' ಎಂದು, ಸಮನಾದ್ದರಿಂದ 'ಸಾಮ' ಎಂದೂ ಕರೆಯುತ್ತಾರೆ. ಎಲ್ಲರಿಂದ ಪ್ರಾಪ್ಯನೂ, ಎಲ್ಲರಿಗೂ ಆಶ್ರಯನೂ, ಸ್ವಾಮಿಯೂ, ಐಶ್ವರ್ಯವುಳ್ಳವನೂ, ಸಾಕ್ಷಾತ್ತಾಗಿ ಎಲ್ಲವನ್ನು ನೋಡುವವನೂ, ಜಗತ್ಕಾರಣನೂ, ಹ್ರಾಸರಹಿತನೂ ಆಗಿದ್ದೇನೆ.

ನನ್ನ ಭಗವಂತನ ಭಜನೆ ಮಾಡುವವರಲ್ಲಿ ಎರಡುಗುಂಪಿದೆ. ತ್ರೈವಿದ್ಯರು, ಭಾಗವತರು ಎಂಬುದಾಗಿ. ತ್ರೈವಿದ್ಯರು ಇತರ ದೇವತೆಗಳನ್ನು ಆರಾಧಿಸಿ ಕೊನೆಗೆ ನನಗೆ ಸಮರ್ಪಣೆ ಮಾಡುತ್ತಾರೆ. ಇಂತಹವರು ದೇವತಾಯಜ್ಞಗಳನ್ನು ಮಾಡಿ ಸೋಮಪಾನ ಮಾಡಿ ಪಾಪವನ್ನು ಕಳೆದುಕೊಳ್ಳುತ್ತಾರೆ. ಸ್ವರ್ಗಲೋಕವನ್ನೂ ಪ್ರಾರ್ಥಿಸುತ್ತಾರೆ. ಅಂತಹ ಲೋಕವನ್ನು ಪಡೆದು ಅನೇಕ ಭೋಗಗಳನ್ನು ಅನುಭವಿಸುತ್ತಾರೆ. ಪುಣ್ಯಭೋಗವು ಮುಗಿದ ಮೇಲೆ ಮತ್ತೆ ಭೂಮಿಗೆ ಬರುತ್ತಾರೆ.

ಹೀಗೆ ಅವರಿಗೆ ಸ್ವರ್ಗಲೋಕಕ್ಕೂ ಭೂಲೋಕಕ್ಕೂ ಗಮನಾಗಮನಗಳು ಆಗುತ್ತಿರುತ್ತವೆ. ಭಾಗವತರು ನನ್ನನ್ನೇ ಪ್ರಧಾನವಾಗಿ ಚಿಂತಿಸುತ್ತಾ ಬಹಳವಾಗಿ ಉಪಾಸನೆ ಮಾಡುತ್ತಾರೆ. ಹೀಗೆ ನಿರಂತರ ನನ್ನಲ್ಲಿ ಮನೋಯೋಗವುಳ್ಳ ಭಾಗವತರ ಯೋಗಕ್ಷೇಮವನ್ನು ನಾನು ವಹಿಸುತ್ತೇನೆ.

ಭಕ್ತಿಯಿಂದ ನನಗೆ ಒಂದು ಹೂವನ್ನೋ, ಹಣ್ಣನ್ನೋ, ಎಲೆಯನ್ನೋ, ನೀರನ್ನೋ ಸಹ ಕೊಟ್ಟರೂ ಸಹ ಸ್ವೀಕರಿಸುತ್ತೇನೆ. ಆದ್ದರಿಂದ ಎಲೈ! ಅರ್ಜುನನೇ, ನೀನು ಏನನ್ನು ಮಾಡುತ್ತೀಯೋ, ಏನನ್ನು ಭೋಗ ಮಾಡುತ್ತೀಯೋ, ಏನು ಹೋಮ ಮಾಡುತ್ತೀಯೋ , ಏನು ತಪಸ್ಸು ಮಾಡುತ್ತೀಯೋ ಅದನ್ನು ನನಗೆ ಸಮರ್ಪಿಸು.

ದೇವತೆಗಳನ್ನು ಪೂಜಿಸುವವರು ದೇವತೆಗಳನ್ನು ಹೊಂದುತ್ತಾರೆ. ಪಿತೃಗಳನ್ನು ಪೂಜಿಸುವವರು ಪಿತೃಗಳನ್ನು ಹೊಂದುತ್ತಾರೆ. ಭೂತಾರಾಧನೆ ಮಾಡುವವರು ಭೂತಾರಾಧನೆ ಮಾಡುತ್ತಾರೆ. ನನ್ನನ್ನು ಪೂಜಿಸುವವರು ನನ್ನ ಲೋಕವನ್ನೇ ಹೊಂದುತ್ತಾರೆ. ಮೇಲ್ನೋಟಕ್ಕೆ ದೇವತೆಗಳನ್ನು ಪೂಜಿಸುವವರೆಲ್ಲರೂ ದೇವಲೋಕವನ್ನು ಹೊಂದುತ್ತಾರೆ. ಅವರ ಪೂಜೆಯನ್ನು ದೇವತೆಗಳು ಸ್ವೀಕರಿಸುತ್ತಾರೆ ಎಂದು ತೋರಿದರೂ ಸಹ ಆಸ್ತಿಕರ ಪೂಜೆಯನ್ನೇ ದೇವತೆಗಳು ಸ್ವೀಕರಿಸುತ್ತಾರೆ. ರಾಜಸರು ಮಾಡುವ ಪೂಜೆಗಳನ್ನು ಇಂದ್ರಾದಿ ದೇವತಾನಾಮವುಳ್ಳ ಅಸುರರು ಸ್ವೀಕರಿಸುತ್ತಾರೆ. ತಾಮಸರು ಮಾಡುವ ಪೂಜೆಯನ್ನು ಇಂದ್ರಾದಿ ನಾಮವುಳ್ಳ ಭೂತಗಳು ಸ್ವೀಕರಿಸುತ್ತವೆ. ಸಾತ್ತ್ವಿಕರಿಗೆ ಪ್ರಸಿದ್ಧವಾದ ಸ್ವರ್ಗಲೋಕವು ದೊರಕಿದರೆ ರಾಜಸರಿಗೆ ಸಾಂಕಲ್ಪಿಕಸ್ವರ್ಗ ಎಂಬ ಸ್ವರ್ಗಸದೃಶವಾದ ಲೋಕವು ಸಿಗುತ್ತದೆ. ತಾಮಸರಿಗೆ ಭೂತಾದಿರೂಪಗಳು ಬಂದು ಭೂತಗಳ ಲೋಕಗಳು ಸಿಗುತ್ತದೆ.

ಪಾಪಮಾಡಿ ಸ್ತ್ರೀಯರಾಗಿ, ವೈಶ್ಯರಾಗಿ, ಶೂದ್ರರಾಗಿ ಹುಟ್ಟಿದವರೂ ಸಹ ನನ್ನನ್ನು ಆಶ್ರಯ ಮಾಡಿದರೆ ಉತ್ತಮಗತಿಯನ್ನು ಪಡೆಯುತ್ತಾರೆ. ಹೀಗಿರುವಾಗ ಪುಣ್ಯ ಮಾಡಿ ಬ್ರಾಹ್ಮಣರಾಗಿಯೂ, ಕ್ಷತ್ರಿಯರಾಗಿಯೂ ಹುಟ್ಟಿದವರು ನನ್ನನ್ನು ಆಶ್ರಯಿಸಿ ಉತ್ತಮಗತಿಯನ್ನು ಪಡೆಯುತ್ತಾರೆಂದು ಹೇಳಬಾಕಾದ್ದೇನು?

ಆದ್ದರಿಂದ ಅರ್ಜುನನೇ! ಸಾಧನರಹಸ್ಯವನ್ನು ಹೇಳುತ್ತೇನೆ ಕೇಳು. ನನ್ನಲ್ಲಿ ಮನಸ್ಸಿಡು. ನನ್ನ ಭಕ್ತನಾಗು. ನನ್ನನ್ನೇ ಕುರಿತು ಪೂಜೆ ಮಾಡು. ನನ್ನನ್ನೇ ನಮಸ್ಕಾರ ಮಾಡು. ಇದರಿಂದ ನನ್ನನ್ನೇ ಹೊಂದುತ್ತೀಯೆ. ನೀನು ನನಗೆ ಪ್ರಿಯನಾದ್ದರಿಂದ ಈ ರಹಸ್ಯವನ್ನು ಪ್ರತಿಜ್ಞೆ ಮಾಡಿ ಹೇಳಿದ್ದೇನೆ' ಎಂಬುದಾಗಿ ಶ್ರೀಕೃಷ್ಣನು ರಾಜವಿದ್ಯೆ ಎಂಬ ಶ್ರೇಷ್ಠವಾದ ರಹಸ್ಯವಾದ ವಿದ್ಯೆಯನ್ನು ಉಪದೇಶ ಮಾಡಿದನು.

## ದಶಮಾಧ್ಯಾಯದ ಸಾರ

ಭಗವಂತನು ತನ್ನ ಮಹಿಮೆಯ ಉಪದೇಶವನ್ನು ಮುಂದುವರೆಸುತ್ತಾನೆ. ಮೊದಲಿಗೆ ತನ್ನ 'ಸರ್ವಕರ್ತೃತ್ವ' ಎಂಬ ಮಹಿಮೆಯನ್ನು ಹೇಳುತ್ತಾನೆ.

'ಅರ್ಜುನ! ಸಮಸ್ತಜಗತ್ತಿನ ಸೃಷ್ಟಿಕರ್ತನೂ ಲಯಕರ್ತನೂ ನಾನೇ ಆಗಿದ್ದೇನೆ. ನನಗೆ ಆದಿಯೇ ಇಲ್ಲವಾದ್ದರಿಂದ ನನ್ನ ಆದಿಯನ್ನು ಯಾರಿಗೆ ತಿಳಿಯಲು ಸಾಧ್ಯ? ಅಷ್ಟಲ್ಲದೇ ನನ್ನಿಂದಲೇ ಎಲ್ಲರೂ ಹುಟ್ಟಿದವರಾಗಿರುವಾಗ ನನ್ನ ಆದಿಯನ್ನು ಆಗಲೀ, ಮಹಿಮೆಯನ್ನಾಗಲೀ ಬ್ರಹ್ಮಾದಿಜ್ಞಾನಿಗಳೂ ತಿಳಿಯಲಾರರು. ಹೀಗೆ ನಾನು ಅನಾದಿನಿತ್ಯ ಎಂದು, ಸರ್ವೇಶ್ವರ ಎಂದು ಯಾರು ತಿಳಿಯುತ್ತಾರೋ ಅವರು ಎಲ್ಲಾ ಪಾಪದಿಂದ ಮುಕ್ತರಾಗುತ್ತಾರೆ. ಹೀಗೆ ಜಗತ್ತಿಗೆ ಕಾರಣನಾದ ನಾನು ವಿಶೇಷವಾಗಿ ಮರೀಚ್ಯಾದಿಸಪ್ತಋಷಿಗಳಿಗೂ ಸ್ವಾಯಂಭುವ, ಸ್ವಾರೋಚಿಷ ,ಉತ್ತಮ, ರೈವತ ಎಂಬ ನಾಲ್ಕುಮನುಗಳಿಗೂ ವಿಶೇಷ ಕಾರಣನಾಗಿದ್ದೇನೆ.

ಲೋಕದಲ್ಲಿರುವ ಪ್ರಜೆಗಳೆಲ್ಲ ಆ ಸಪ್ತಋಷಿಗಳು, ಮತ್ತು ನಾಲ್ಕು ಮನುಗಳ ವಂಶದಲ್ಲಿ ಬಂದವರೇ ಆಗಿದ್ದಾರೆ. ಬುದ್ಧಿ, ಜ್ಞಾನ, ಅಜ್ಞಾನ, ಸ್ಮೃತಿ , ಮೇಧಾ, ಧೃತಿ, ಕ್ಷಮೆ ಮೊದಲಾದ ಎಲ್ಲವೂ ಸಹ ಎಲ್ಲರಿಗೂ ಸಹ ನನ್ನಿಂದಲೇ ಆಗುತ್ತಿದೆ'.

ಹೀಗೆ ಉಪದೇಶ ಪಡೆದ ಅರ್ಜುನರು ಮತ್ತೆ ಶ್ರೀಕೃಷ್ಣನನ್ನು ಪ್ರಾರ್ಥಿಸುತ್ತಾರೆ. ನಿನ್ನ ವಿಭೂತಿರೂಪಗಳನ್ನು ತಿಳಿಸಲು ಇಚ್ಛಿಸುತ್ತೇನೆ. ನಿನ್ನನ್ನು ಯಾವ ಯಾವ ಪದಾರ್ಥಗಳಲ್ಲಿ ನಾನು ಚಿಂತಿಸಬೇಕು ಎಂಬುದಾಗಿ. ಆಗ ಶ್ರೀಕೃಷ್ಣನು ವಿಭೂತಿರೂಪ ಎಂಬುವುದಕ್ಕೆ ವಿಶಿಷ್ಟರೂಪ, ವಿವಿಧರೂಪ ಎಂಬ ಎರಡು ಅಭಿಪ್ರಾಯವನ್ನಿಟ್ಟುಕೊಂಡು ಉತ್ತರ ಕೊಡುತ್ತಾನೆ.

'ನನ್ನ ವಿಭೂತಿರೂಪಗಳಿಗೆ ಕಡೆಯೇ ಇಲ್ಲ. ಎಲ್ಲಾ ವಿಭೂತಿಗಳನ್ನು ಹೇಳಲು ಸಾಧ್ಯವೇ ಇಲ್ಲ. ಕೆಲವೊಂದು ಪ್ರಧಾನವಾದ್ದನ್ನು ಹೇಳುತ್ತೇನೆ; ಕೇಳು' ಎಂದು ಪ್ರತಿಜ್ಞೆ ಮಾಡಿ ಸಜಾತೀಯ, ಸಜಾತೀಯ ಏಕದೇಶ, ವಿಜಾತೀಯ, ಸಹಜ ಎಂಬ ನಾಲ್ಕು ರೀತಿಯ ವಿಭೂತಿಗಳನ್ನು ವರ್ಣಿಸುತ್ತಾನೆ. ಅವುಗಳ ಸಂಗ್ರಹ ಹೀಗಿದೆ.

ಸಜಾತೀಯವಿಭೂತಿರೂಪ ಎಂದರೆ ಒಂದೇ ಜಾತಿಯ ಪದಾರ್ಥಗಳಲ್ಲಿ ಯಾವುದೋ ಒಂದು ಶ್ರೇಷ್ಠವಾಗಿರುತ್ತದೆ. ಅದರ ಶ್ರೇಷ್ಠತೆಗೆ ಕಾರಣನಾಗಿ ಭಗವಂತನು ಅಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುತ್ತಾನೆ. ಉದಾ: ಅಷ್ಟವಸುಗಳ ಪೈಕಿ ಅಗ್ನಿಯು ಶ್ರೇಷ್ಠ. ಅಗ್ನಿಯಲ್ಲಿ ಅಗ್ನಿನಾಮಕನಾಗಿ ಭಗವಂತನು ಇದ್ದು ಅಗ್ನಿಯ ಶ್ರೇಷ್ಠತೆಗೆ ಕಾರಣನಾಗಿದ್ದಾನೆ. ಇದರಂತೆ ಏಕಾದಶರುದ್ರರ ಮಧ್ಯೆ ಶಂಕರನು ಶ್ರೇಷ್ಠ. ಮಾಸಗಳ ಮಧ್ಯೆ ಮಾರ್ಗಶೀರ್ಷವು ಶ್ರೇಷ್ಠ. ಋತುಗಳ ಮಧ್ಯೆ ಕುಸುಮಾಕರ ಎಂಬ ವಸಂತಋತುವು ಶ್ರೇಷ್ಠ ಇತ್ಯಾದಿಯಾಗಿ ತಿಳಿಯಬೇಕು.

ಎರಡನೆಯದು ಸಜಾತೀಯಏಕದೇಶ ವಿಭೂತಿರೂಪ. ಎಂದರೆ ಒಂದೇ ಜಾತಿಯ ಪದಾರ್ಥಗಳ ಮಧ್ಯೆ ಯಾವುದೋ ಒಂದನ್ನೋ, ಕೆಲವನ್ನೋ ಬಿಟ್ಟು ಉಳಿದದ್ದರಲ್ಲಿ ಒಂದು ಪದಾರ್ಥವು ಶ್ರೇಷ್ಠವಾಗಿರುತ್ತದೆ. ಅದರ ಶ್ರೇಷ್ಠತೆಗೆ ಕಾರಣವಾಗಿ ಭಗವಂತನ ವಿಶೇಷಸನ್ನಿಧಾನ ಅಲ್ಲಿರುತ್ತದೆ.ಉದಾ: ಪಾಂಡವರ ಮಧ್ಯೆ ಭೀಮಸೇನದೇವರನ್ನು ಬಿಟ್ಟು ಉಳಿದವರಲ್ಲಿ ಅರ್ಜುನರು ಶ್ರೇಷ್ಠ. ಅಲ್ಲಿ ಧನಂಜಯ ಎಂಬ ಹೆಸರಿನಿಂದ ಭಗವಂತನು ಇದ್ದು ಆ ಶ್ರೇಷ್ಠತೆಗೆ ಕಾರಣನಾಗಿದ್ದಾನೆ. ಅದರಂತೆ ದೇವತೆಗಳಲ್ಲಿ ಬ್ರಹ್ಮ ರುದ್ರಾದಿಗಳನ್ನು ಬಿಟ್ಟು ಉಳಿದವರಲ್ಲಿ ಇಂದ್ರನು ಶ್ರೇಷ್ಠ. ವೇದಗಳಲ್ಲಿ ಋಗ್ವೇದವನ್ನು ಬಿಟ್ಟು ಉಳಿದದ್ದರಲ್ಲಿ ಸಾಮವೇದವು ಶ್ರೇಷ್ಠ. ಪುರೋಹಿತರ ಮಧ್ಯೆ ಬೃಹಸ್ಪತ್ಯಾಚಾರ್ಯರನ್ನು ಬಿಟ್ಟು ವಸಿಷ್ಠರು ಶ್ರೇಷ್ಠ ಇತ್ಯಾದಿ.

ಮೂರನೆಯದು ವಿಜಾತೀಯ ವಿಭೂತಿರೂಪ. ನಕ್ಷತ್ರಮಂಡಲದಲ್ಲಿ ಚಂದ್ರನು ಎದ್ದು ಕಾಣಿಸುತ್ತಾನೆ.ನಕ್ಷತ್ರಗಳ ಜಾತಿ ಬೇರೆ. ಚಂದ್ರನ ಜಾತಿ ಬೇರೆ. ಇಂತಹ ನಕ್ಷತ್ರಗಳ ಮಧ್ಯೆ ಚಂದ್ರನು ಪ್ರಕಾಶದಿಂದ ಶ್ರೇಷ್ಠನಾಗಿರಲು ಕಾರಣನಾಗಿ ಭಗವಂತನು ಅಲ್ಲಿ ಶಶೀ ಎಂಬ ಹೆಸರಿನಿಂದ ಇದ್ದಾನೆ. ಸ್ತ್ರೀ-ಪುರುಷರು ಬೇರೆ ಬೇರೆ ಜಾತಿಯವರು. ಇವರ ಮಧ್ಯೆ ಪುರುಷನಲ್ಲಿ ಭಗವಂತನ ವಿಭೂತಿರೂಪವುಂಟು.

ನಾಲ್ಕನೆಯದು ಸಹಜವಿಭೂತಿರೂಪ. ಆದಿತ್ಯರ ಮಧ್ಯೆ ನಾನೇ ವಿಷ್ಣು ಎಂದು ಶ್ರೀಕೃಷ್ಣನು ಹೇಳುತ್ತಾನೆ. ಈ ವಿಷ್ಣು ಎಂಬುವರೂಪವು ಇನ್ನೊಬ್ಬ ದೇವತೆಯಲ್ಲಿ ಅಂತರ್ಗತವಾದದ್ದಲ್ಲ. ಅದು ಸಾಕ್ಷಾತ್ ಭಗವಂತನ ರೂಪವೇ ಆಗಿದೆ. ಇದಕ್ಕೆ ಸಹಜವಿಭೂತಿರೂಪ ಎನ್ನುತ್ತಾರೆ. ಇದರಂತೆ ಸಿದ್ಧರ ಮಧ್ಯೆ ಕಪಿಲದೇವರು. ಮುನಿಗಳ ಮಧ್ಯೆ ವೇದವ್ಯಾಸದೇವರು. ಶಸ್ತ್ರಧಾರಿಗಳ ಮಧ್ಯೆ ರಾಮ ಇತ್ಯಾದಿ.

ಇದಲ್ಲದೇ ಭೂಮಿಯಲ್ಲಿರುವ ಗಂಧ, ನೀರಿನಲ್ಲಿರುವ ರಸ, ಸೂರ್ಯ- ಚಂದ್ರ- ಅಗ್ನಿಗಳಲ್ಲಿ ಇರುವ ತೇಜಸ್ಸು ಆಕಾಶದಲ್ಲಿರುವ ಶಬ್ದ ಮೊದಲಾದ ವಿಶೇಷಗುಣಗಳಿಗೆ ನಿಯಾಮಕನಾಗಿ ಭಗವಂತನು ಆಯಾಯಾ ನಾಮಕನಾಗಿ

ಅಲ್ಲಲ್ಲಿ ಇದ್ದಾನೆ. ಇಂತಹ ವಿಶಿಷ್ಟರೂಪಗಳನ್ನೂ ಸಹ ವಿಭೂತಿರೂಪ ಎನ್ನುತ್ತಾರೆ. ಒಟ್ಟಿನಲ್ಲಿ ಎಲ್ಲಿ ವಿಶಿಷ್ಟವಾದ ಕೀರ್ತಿ, ಕಾಂತಿ, ತೇಜಸ್ಸು, ಬಲ ಮೊದಲಾದ ಶ್ರೇಷ್ಠಗುಣಗಳು ಇವೆಯೋ ಅಲ್ಲೆಲ್ಲಾ ಭಗವಂತ ವಿಭೂತಿರೂಪವು ಇದೆ ಎಂದು ತಿಳಿಯಬೇಕು. ಇದು ವಿಭೂತಿಯ ವಿಸ್ತಾರ.

ಇಂತಹ ವಿಭೂತಿರೂಪಗಳನ್ನು ಭಗವಂತನು ಉಪದೇಶಿಸಿ, ಹೇ! ಅರ್ಜುನ, ನಿನ್ನ ಯೋಗ್ಯತೆ ದೊಡ್ಡದು. ಮೇಲೆ ಹೇಳಿದ ಅಲ್ಲಲ್ಲಿ ಇರುವ ಒಂದೊಂದು ವಿಭೂತಿರೂಪಗಳನ್ನು ತಿಳಿದು ನಿನಗೆ ಆಗ ಬೇಕಾದ ಹೆಚ್ಚಿನ ಪ್ರಯೋಜನ ಇಲ್ಲ. ನಾನು ಒಂದೇ ಅಂಶದಿಂದ ಎಲ್ಲ ಜಗತ್ತನ್ನು ವ್ಯಾಪಿಸಿ ಇದ್ದೇನೆ. ಅಂತಹ ವ್ಯಾಪ್ತರೂಪವನ್ನು ತಿಳಿಯುವ ಯೋಗ್ಯತೆ ನಿನ್ನದು'.

## ಏಕಾದಶಾಧ್ಯಾಯದ ಸಾರ

ಹೀಗೆ ಉಪದೇಶ ಪಡೆದ ಅರ್ಜುನರು ಮತ್ತೆ ಶ್ರೀಕೃಷ್ಣನನ್ನು ಪ್ರಾರ್ಥಿಸುತ್ತಾರೆ.

'ನೀನು ಮಾಡಿದ ಅಧ್ಯಾತ್ಮರಹಸ್ಯದ ಉಪದೇಶದಿಂದ ನನ್ನ ಮೋಹವು ಪರಿಹಾರವಾಯಿತು. ನಿನ್ನ ಮಹಿಮೆಯನ್ನು ಏನೇನು ಹೇಳುತ್ತಿದ್ದೀಯೋ ಅದು ಸತ್ಯವಾದದ್ದೆಂದು ತಿಳಿದಿದ್ದೇನೆ. ಇಂತಹ ನಿನ್ನ ಮಹಿಮೆಯನ್ನು ವೇದವ್ಯಾಸರಿಂದಲೂ ನಾರದರಿಂದಲೂ ಕೇಳಿದ್ದೇನೆ. ನಿನ್ನ ಮಹಿಮೆ ತಿಳಿಯಲು ದೇವ, ದಾನವ, ಮಾನವರಿಗೆ ಸಾಧ್ಯವಿಲ್ಲ. ನೀನು ಹೇಳಿದ ವ್ಯಾಪ್ತರೂಪವನ್ನು ನೋಡಲು ಇಚ್ಛಿಸುತ್ತೇನೆ. ನನಗೆ ನೋಡಲು ಸಾಧ್ಯವೆಂದು ನೀನು ತಿಳಿಯುವಿಯಾದರೆ ಅದನ್ನು ನನಗೆ ತೋರಿಸು'.

ಹೀಗೆ ಅರ್ಜುನರು ಪ್ರಾರ್ಥಿಸಿದಾಗ ಶ್ರೀಕೃಷ್ಣನು, ' ಎಲೈ! ಅರ್ಜುನನೇ, ನನ್ನ ಆ ವಿಶ್ವರೂಪವನ್ನು ನಿನ್ನ ಈ ಕಣ್ಣಿನಿಂದ ಕಾಣಲು ಸಾಧ್ಯವಿಲ್ಲ. ನಿನಗೆ ದಿವ್ಯಚಕ್ಷುಸ್ಸನ್ನು ಕೊಡುತ್ತೇನೆ. ನನ್ನ ಈಶ್ವರಸಂಬಂಧಿಯಾದ ರೂಪವನ್ನು ನೋಡು' ಎಂದು ಹೇಳಿ ತನ್ನ ರೂಪವನ್ನು ಪ್ರಾದುರ್ಭಾವ ಮಾಡಿದನು.

ಆ ಭಗವಂತನ ರೂಪದಲ್ಲಿ ಅರ್ಜುನರು ಇಡೀ ವಿಶ್ವವನ್ನೇ ಕಂಡರು. ಎಲ್ಲಾ ಲೋಕಗಳು, ಎಲ್ಲಾ ದೇವತೆಗಳು, ಬ್ರಾಹ್ಮಣಾದಿ ವರ್ಣಗಳು, ಎಲ್ಲಕ್ಕೂ ಆಶ್ರಯವಾದ ಆ ರೂಪವನ್ನು ಕಂಡು ರೋಮಾಂಚ- ವಾಯಿತು. ಅನೇಕರೂಪಗಳು, ಅನೇಕ ದಿವ್ಯಾಭರಣಗಳು, ಅನೇಕ ಆಯುಧಗಳು, ಅನೇಕ ಮುಖಗಳು, ಅನೇಕ ಬಾಹುಗಳು, ಅನೇಕಉದರಗಳು, ಅನೇಕಕರಚರಣಾದಿಗಳು ಇವುಗಳನ್ನು ಕಂಡರು. ಅರ್ಜುನರ ಯೋಗ್ಯತೆಗಿಂತ ಸ್ವಲ್ಪ ಹೆಚ್ಚಾಗಿ ತೋರಿಸಿದ್ದರಿಂದ ಭಯವೂ ಆಯಿತು. ಆಗ ಅರ್ಜುನರು ಶ್ರೀಕೃಷ್ಣನನ್ನು ಹೀಗೆ ಪ್ರಾರ್ಥಿಸಿದರು.

'ಸ್ವಾಮಿ! ನಿನ್ನ ಒಂದು ರೂಪದಿಂದಲೇ ಭೂಮಿಯನ್ನೂ ಆಕಾಶವನ್ನೂ ವ್ಯಾಪಿಸಿದ್ದೀಯೆ. ನಿನ್ನ ನಾಭಿಕಮಲದಲ್ಲಿ ಬ್ರಹ್ಮದೇವರನ್ನೂ , ಬ್ರಹ್ಮದೇವರ ತೊಡೆಯ ಮೇಲೆ ಮಹದೇವರನ್ನೂ , ಅವರ ದೇಹದಲ್ಲಿ ಇಡೀ ವಿಶ್ವವನ್ನೂ ಕಾಣುತ್ತಿದ್ದೇನೆ. ಉರಗಗಳು, ಪಕ್ಷಿಗಳು, ದೇವತೆಗಳು, ದಾನವರು ಎಲ್ಲರೂ ನಿನ್ನನ್ನು ಆಶ್ರಯಿಸಿದ್ದಾರೆ. ಎರಡೂ ಕಡೆ ಇರುವ ಸೈನಿಕರನ್ನು ನಿನ್ನ ನಾಲಿಗೆಗಳಿಂದ ಎಳೆದು ಕೊಳ್ಳುತ್ತಿದ್ದೀಯೆ.ಅನೇಕರು ನಿನ್ನ ಹಲ್ಲುಗಳಿಗೆ ಸಿಕ್ಕಿ ಅವರ ತಲೆಗಳು ಬಿರುಕುಬಿಟ್ಟಿವೆ. ನಿನ್ನ ಕರಾಲವಾದ ಕೋರೆದಾಡೆಗಳು, ಕಪ್ಪು ಕೂದಲುಗಳು, ಎಲ್ಲರನ್ನೂ ಬಾಯಿಗೆ ಎಳೆದುಕೊಂಡು ಚಪ್ಪರಿಸುತ್ತಿರುವ ತುಟಿಗಳು ಇವೆಲ್ಲ ಕಂಡು ಮೂರುಲೋಕವು ಹೆದರುತ್ತಿದೆ. ನೀನು ಯಾರು ಎಂದು ತಿಳಿಸಬೇಕು'.

ಹೀಗೆ ಪ್ರಾರ್ಥಿಸಿದಾಗ ಶ್ರೀಕೃಷ್ಣನು ಮತ್ತೆ ಹೇಳಿದನು.'ನಾನು ಕಾಲರೂಪಿ ಪರಮಾತ್ಮ. ಎಲ್ಲರನ್ನೂ ಸಂಹಾರ ಮಾಡಲು ಪ್ರವೃತ್ತನಾಗಿದ್ದೇನೆ. ನಿಮ್ಮ ಕಡೆ ಪಂಚಪಾಂಡವರು, ಸಾತ್ಯಕಿ ಮತ್ತು ಯುಯುತ್ಸು, ಶತ್ರುಗಳ ಕಡೆ ಅಶ್ವತ್ಥಾಮ, ಕೃತವರ್ಮ, ಮತ್ತು ಕೃಪಾಚಾರ್ಯರು ಇವರನ್ನು ಉಳಿದು ಯಾರೂ ಉಳಿಯುವುದಿಲ್ಲ.

ಭೀಷ್ಮ, ದ್ರೋಣ, ಕರ್ಣ, ಸೈಂಧವ ಮೊದಲಾದ ಎಲ್ಲಾ ವೀರರನ್ನು ನಾನೇ ಸೂಕ್ಷ್ಮವಾಗಿ ಕೊಂದಿದ್ದೇನೆ. ನೀನು ನಿಮಿತ್ತಮಾತ್ರ ಆಗು. ಬಿಲ್ಲು ಹಿಡಿ. ಕೀರ್ತಿಯನ್ನು ಪಡೆ. ಶತ್ರುಗಳನ್ನು ಗೆದ್ದು ಸಮೃದ್ಧವಾದ ರಾಜ್ಯವನ್ನು ಅನುಭವಿಸು. ಹಿಂದೆ ಕೃಷ್ಣನು ಗೆದ್ದರೆ ರಾಜ್ಯ, ಸತ್ತರೆ ಸ್ವರ್ಗ ಎಂದು ಸಮಾಧಾನ ಮಾಡಿದ್ದನು. ಈಗ ಗೆಲ್ಲು- ಸೋಲಿನ ಸಂಶಯವೂ ಇಲ್ಲ, ನೀನೇ ಗೆಲ್ಲುತ್ತೀಯೆ ಎಂದು ನಿಶ್ಚಯವಾಗಿ ಹೇಳುತ್ತಿದ್ದಾನೆ.'.

ಹೀಗೆ ಶ್ರೀಕೃಷ್ಣನ ಮಾತನ್ನು ಕೇಳಿ ಮತ್ತೆ ಅರ್ಜುನರು ಪ್ರಾರ್ಥಿಸುತ್ತಾರೆ. 'ಸ್ವಾಮಿ! ನೀನು ಹೇಳಿದ್ದೆಲ್ಲವೂ ಸತ್ಯ. ಸಜ್ಜನರು ನಿನ್ನ ಮಹಿಮೆಯನ್ನು ಕೊಂಡಾಡುತ್ತಾ ಸಂತೋಷಪಡುತ್ತಾರೆ. ನಿನ್ನಲ್ಲಿ ಅನುರಕ್ತರೂ ಆಗುತ್ತಾರೆ. ರಾಕ್ಷಸರು ನಿನ್ನನ್ನು ಕಂಡು ಹೆದರಿ ಓಡುತ್ತಿದ್ದಾರೆ. ನಿನಗೆ ಹಿಂದಿನಿಂದಲೂ ಮುಂದಿನಿಂದಲೂ ದಿಕ್ಕುಗಳಿಂದಲೂ ವಿದಿಕ್ಕುಗಳಿಂದಲೂ ನಮಸ್ಕಾರ. ನೀನು ಪೂರ್ಣನಾದ ಪರಬ್ರಹ್ಮನೇ ಆಗಿದ್ದೀಯೆ. ಅನಂತಪರಾಕ್ರಮವುಳ್ಳವನು, ಅನಂತವೀರ್ಯವುಳ್ಳವನು, ದೇಶತಃ ಕಾಲತಃ ಗುಣತಃ ನಿನಗೆ ಕಡೆಯೇ ಇಲ್ಲ. ವರುಣ, ಚಂದ್ರ, ಅಗ್ನಿ, ಯಮ, ರುದ್ರ, ಬ್ರಹ್ಮ ಮೊದಲಾದ ಎಲ್ಲ ನಾಮಗಳನ್ನು ಧರಿಸಿ ಎಲ್ಲರ ಅಂತರ್ಯಾಮಿಯು ನೀನೇ ಆಗಿದ್ದೀಯೆ. ಎಲ್ಲ ದೇವತೆಗಳು ನಿನ್ನ ಅಧೀನವಾಗಿದ್ದಾರೆ. ನಿನ್ನನ್ನು ಸ್ನೇಹಿತ ಎಂದು ತಿಳಿದು ಕೃಷ್ಣ, ಯಾದವ, ಸಖಾ ಎಂದು ಸಂಬೋಧನೆ ಮಾಡುತ್ತಾ ಸಲಿಗೆಯಿಂದ ಏನು ಅಪರಾಧಗಳನ್ನು ಮಾಡಿದ್ದೇನೋ ಅವೆಲ್ಲವನ್ನೂ ನಿನ್ನ ಸಮಕ್ಷಮ ಕ್ಷಮಿಸು ಎಂದು ಕೇಳುತ್ತಿದ್ದೇನೆ. ಪತಿಯು ಪತ್ನಿಯ ತಪ್ಪನ್ನು ಕ್ಷಮಿಸುವಂತೆ, ತಂದೆಯು ಮಗನ ತಪ್ಪನ್ನು ಕ್ಷಮಿಸುವಂತೆ, ಸ್ನೇಹಿತನು ಸ್ನೇಹಿತನ ತಪ್ಪನ್ನು ಕ್ಷಮಿಸುವಂತೆ ನನ್ನ ತಪ್ಪುಗಳನ್ನು ನೀನು ಕ್ಷಮಿಸಬೇಕು. ನಿನ್ನ ಈ ರೂಪವನ್ನು ನೋಡಿ ನನಗೆ ಬಹಳ ಹೆದರಿಕೆ ಆಗುತ್ತಿದೆ. ಹಿಂದೆ ನೀನು ತೋರಿಸುತ್ತಿದ್ದ ಆನಾಲ್ಕುಭುಜದ ಸೌಮ್ಯರೂಪವನ್ನು ತೋರಿಸಬೇಕು' ಎಂಬುದಾಗಿ.

ಆಗ ಶ್ರೀಕೃಷ್ಣನು, 'ಅರ್ಜುನ! ಈ ನನ್ನ ರೂಪವನ್ನು ನೋಡಬೇಕೆಂದು ದೇವತೆಗಳೂ ಅಪೇಕ್ಷೆ ಪಡುತ್ತಿರುತ್ತಾರೆ. ನಿನಗಿಂತ ಕೆಳಗಿನವರು ಇಂತಹ ರೂಪವನ್ನು ನೋಡಲು ಶಕ್ಯವೇ ಇಲ್ಲ. ಯಜ್ಞ, ತಪಸ್ಸು, ದಾನ ಮೊದಲಾದ ಸತ್ಕರ್ಮಗಳಿಂದಲೂ ಸಹ ನಾನು ನೋಡಲು ಅಶಕ್ಯನು. ಭಕ್ತಿಯಿಂದಲೇ ನಾನು ಲಭ್ಯನು. ಭಯ ಪಡಬೇಡ. ನನ್ನ ಆ ಚತುರ್ಭುಜರೂಪವನ್ನೇ ನೋಡು' ಎಂದು ಹೇಳಿ ನಿತ್ಯವೂ ಕಾಣುತ್ತಿದ್ದ ಆ ಸಣ್ಣರೂಪವನ್ನು ವ್ಯಕ್ತಪಡಿಸಿದನು; ಮತ್ತು ಅರ್ಜುನರನ್ನು ಸಂತೈಸಿದನು.

ಹೀಗೆ ಈ ವಿಶ್ವರೂಪಾಧ್ಯಾಯದಲ್ಲಿ ಅಧಿಕಾರಿಗಳಿಗೆ ಧ್ಯಾನಕ್ಕೋಸ್ಕರ ಭಗವಂತನ ವಿಶ್ವರೂಪವನ್ನು ವರ್ಣಿಸಲಾಗಿದೆ.

## ದ್ವಾದಶಾಧ್ಯಾಯ ಸಾರ

ಹೀಗೆ ವಿಶ್ವರೂಪವನ್ನು ಕಂಡು ಪುಳಕಿತರಾಗಿ ಸಂತೋಷ, ಭಯಗಳನ್ನು ಹೊಂದಿ ಮತ್ತೆ ಸೌಮ್ಯರೂಪವನ್ನು ಕಂಡು ಸಮಾಧಾನಗೊಂಡ ಅರ್ಜುನರು ಶ್ರೀಕೃಷ್ಣನನ್ನು ಮತ್ತೆ ಪ್ರಶ್ನೆ ಮಾಡುತ್ತಾರೆ.

'ಸ್ವಾಮಿ! ನೀನು ಹಿಂದೆ ತಿಳಿಸಿದಂತೆ ಸಂತತ ಮನೋಯೋಗ ಮಾಡುತ್ತಾ ನಿನ್ನ ಉಪಾಸನೆ ಮಾಡುವವರೂ ಇದ್ದಾರೆ. ನಾಶರಹಿತನಾದ್ದರಿಂದ 'ಅಕ್ಷರ' ಎಂದು, ಅತಿಸೂಕ್ಷ್ಮಳಾದ್ದರಿಂದ 'ಅವ್ಯಕ್ತ' ಎಂದು ಕರೆಸತಕ್ಕ ಪ್ರಕೃತಿಗೆ ಅಭಿಮಾನಿಯಾದ ಲಕ್ಷ್ಮೀದೇವಿಯನ್ನು ಉಪಾಸನೆ ಮಾಡುವವರೂ ಇದ್ದಾರೆ. ಇವರಿಬ್ಬರ ಮಧ್ಯೆ ಯಾರು ಶ್ರೇಷ್ಠರು?

ಈ ಪ್ರಶ್ನೆ ಏಕೆ ಹುಟ್ಟುತ್ತದೆ ಎಂದರೆ ಬ್ರಹ್ಮಾದಿದೇವತೆಗಳು ಸ್ವಯಂ ಸಂಸಾರಬದ್ಧರಾದ್ದರಿಂದ ಅವರಿಗೆ ಮುಕ್ತಿ ಕೊಡುವ ಸಾಮರ್ಥ್ಯವಿಲ್ಲ. ಆದರೆ ರಮಾದೇವಿಯು ನಿತ್ಯಮುಕ್ತಳಾದ್ದರಿಂದ ವೇದಗಳೇ ಹೇಳುವಂತೆ ಮೋಕ್ಷ ಕೊಡುವ ಸಾಮರ್ಥ್ಯ ಅವಳಿಗಿದೆ. ಆದ್ದರಿಂದ ನಿನ್ನ ಉಪಾಸನೆ ಶ್ರೇಷ್ಠವೋ, ರಮಾದೇವಿಯ ಉಪಾಸನೆ ಶ್ರೇಷ್ಠವೋ ಎಂದುತಿಳಿಸಬೇಕು'.

ಹೀಗೆ ಪ್ರಾರ್ಥನೆ ಮಾಡಿದಾಗ ಶ್ರೀಕೃಷ್ಣ ಕೊಟ್ಟ ಉತ್ತರದ ಕ್ರಮ ಹೀಗಿದೆ.

'ನನ್ನ ಉಪಾಸನೆಯ ಮಾರ್ಗವೇ ಶ್ರೇಷ್ಠವಾದದ್ದು. ರಮಾದೇವಿಯ ಉಪಾಸನೆ ಮಾಡಿ ಆ ಮೂಲಕವೂ ನನ್ನನ್ನು ಹೊಂದಬಹುದು. ಆದರೆ ಆ ಮಾರ್ಗದಲ್ಲಿ ಆಯಾಸವು ಹೆಚ್ಚು. ರಮಾದೇವಿ ಅಥವಾ ಅವ್ಯಕ್ತದ ಉಪಾಸನೆ ಮಾಡುವವನು ಮೊದಲು ನನ್ನ ಉಪಾಸನೆ ಮಾಡಬೇಕು. ಅನಂತರ ಬಹುಕಾಲ ರಮಾದೇವಿಯ ಉಪಾಸನೆ ಮಾಡಬೇಕು. ರಮಾದೇವಿಯ ಅನುಗ್ರಹ ಸಂಪಾದನೆ ಮಾಡಿ ಮತ್ತೆ ಸ್ವಲ್ಪಕಾಲ ನನ್ನನ್ನು ಉಪಾಸನೆ ಮಾಡಿ ನನ್ನ ಅಪರೋಕ್ಷ ಪಡೆಯಬೇಕಾಗುತ್ತದೆ. ಇಷ್ಟು ಪ್ರಯಾಸದಿಂದಲೋ ಅಥವಾ ಇನ್ನೂ ಕಡಿಮೆ ಪ್ರಯಾಸದಿಂದಲೋ ನೇರವಾಗಿ ನನ್ನ ಉಪಾಸನೆಯಿಂದ ನನ್ನ ಅಪರೋಕ್ಷವೇ ಆಗಿಬಿಡುತ್ತದೆ. ಹೀಗಾಗಿ ರಮಾಉಪಾಸನೆಯ ಮೂಲಕ ನನ್ನನ್ನು ಅಪರೋಕ್ಷೀಕರಿಸುವುದು ಸುತ್ತಿಬಳಸುವ ಮಾರ್ಗ. ಇಷ್ಟಲ್ಲದೇ ರಮಾದೇವಿಯ ಉಪಾಸನೆ ಮಾಡುವವರಿಗೆ ಹೆಚ್ಚಿಗೆ ಇಂದ್ರಿಯನಿಗ್ರಹ ಬೇಕಾಗುತ್ತದೆ. ಸಾಮ್ಯಬುದ್ಧಿಯೂ ಚೆನ್ನಾಗಿ ಇರಬೇಕಾಗುತ್ತದೆ. ಹಾಗಿಲ್ಲದಿದ್ದರೆ ರಮಾದೇವಿಯ ಅನುಗ್ರಹ ಆಗುವುದಿಲ್ಲ. ನನ್ನ ಸಮೇತವಾಗಿ ರಮಾದೇವಿಯನ್ನು ಧ್ಯಾನ ಮಾಡಿದಾಗ ರಮಾದೇವಿಯು ಸುಪ್ರಸನ್ನಳಾಗುತ್ತಾಳೆ. ರಮಾದೇವಿಯ ಉಪಾಸನೆಯಲ್ಲಿ ಒಂದು ಪ್ರಯೋಜನ ಎಂದರೆ ಆಕೆಯ ಉಪಾಸನೆಯನ್ನು ಮಾಡಿದ ಒಂದು ತಿಂಗಳೊಳಗೆ ಹೆಚ್ಚಿನ ಐಶ್ವರ್ಯವು ಪ್ರಾಪ್ತವಾಗುತ್ತದೆ.

ಆದ್ದರಿಂದ ರಮಾದಿದೇವತೆಗಳು ನನ್ನ ಪರಿವಾರ ಎಂದು ಚಿಂತಿಸುತ್ತಾ ನನ್ನ ಉಪಾಸನೆ ಮಾಡುವುದೇ ಶ್ರೇಷ್ಠವಾದ ಮಾರ್ಗ. ಹೀಗೆ ಉಪಾಸನೆ ಮಾಡುವವರಿಗೆ ನಾನು ಶೀಘ್ರವಾಗಿಯೇ ಹುಟ್ಟು- ಸಾವು ಎಂಬ ಸಂಸಾರದಿಂದ ಮೋಚನೆ ಮಾಡುತ್ತೇನೆ.

ನನ್ನಲ್ಲೇ ಮನಸ್ಸಿಡು. ನನ್ನಲ್ಲೇ ಬುದ್ಧಿಯನ್ನು ನೆಲೆಗೊಳಿಸು. ಇದರಿಂದ ನನ್ನನ್ನೇ ಹೊಂದುತ್ತೀಯೆ. ನಾನು ಸತ್ಯಪ್ರತಿಜ್ಞೆ ಮಾಡಿ ಹೇಳುತ್ತಿದ್ದೇನೆ. ನನ್ನಲ್ಲಿ ಹೀಗೆ ಮನಸ್ಸು ಮತ್ತು ಬುದ್ಧಿಗಳನ್ನು ನೆಲೆಗೊಳಿಸಲು ಸಾಧ್ಯವಾಗದಿದ್ದರೆ ಪ್ರತಿಕಾರ ರೂಪವಾದ ಅಭ್ಯಾಸದಿಂದ ಮನಸ್ಸನ್ನು ನನ್ನಲ್ಲಿ ಇಟ್ಟು ನನ್ನನ್ನು ಹೊಂದುವ ಪ್ರಯತ್ನ ಮಾಡು. ಅಭ್ಯಾಸ ಮಾಡಲು ಅಸಮರ್ಥನಾದರೆ ನನ್ನ ಪ್ರೀತಿಕರವಾದ ಕರ್ಮಗಳಲ್ಲಿ ಆಸಕ್ತನಾಗು. ಆ ಕರ್ಮಗಳನ್ನೂ ಸಹ ಚೆನ್ನಾಗಿ ಮಾಡಲಾಗದಿದ್ದರೆ ಕೈಲಾದಷ್ಟು ಕರ್ಮಗಳನ್ನು ಮಾಡುತ್ತಾ ಫಲಾಪೇಕ್ಷೆಯನ್ನು ಬಿಡು.

ಅಜ್ಞಾನಪೂರ್ವಕವಾದ ಅಭ್ಯಾಸಕ್ಕಿಂತಲೂ ಜ್ಞಾನವು ಶ್ರೇಷ್ಠ. ಜ್ಞಾನಕ್ಕಿಂತಲೂ ಧ್ಯಾನವು ಶ್ರೇಷ್ಠ. ಸಕಾಮಧ್ಯಾನಕ್ಕಿಂತಲೂ ನಿಷ್ಕಾಮಧ್ಯಾನವು ಶ್ರೇಷ್ಠ. ಇಂತಹ ನಿಷ್ಕಾಮಧ್ಯಾನದಿಂದ ಶಾಂತಿ ಅಥವಾ ಮೋಕ್ಷವು ದೊರಕುತ್ತದೆ.

ಮೋಕ್ಷಕ್ಕೆ ಬೇಕಾದ ಸಾಧನೆಗಳನ್ನು ಹೇಳುತ್ತೇನೆ; ಕೇಳು. ಯಾವ ಪ್ರಾಣಿಗಳನ್ನೂ ದ್ವೇಷ ಮಾಡಬಾರದು. ಕಷ್ಟಕ್ಕೆ ಗುರಿಯಾಗುವವರನ್ನು ಅದನ್ನು ಸೂಚಿಸಿ ರಕ್ಷಿಸಬೇಕು. ಸುಖ-ದುಃಖಗಳನ್ನು ಸಮವಾಗಿ ಕಾಣಬೇಕು. ಕ್ಷಮಾಗುಣ ಇರಬೇಕು. ಭಗವಂತನು ಕೊಟ್ಟದ್ದರಲ್ಲಿ ತೃಪ್ತಿ ಇರಬೇಕು. ನಿರಂತರ ಭಗವಂತನಲ್ಲಿ ಮನೋಯೋಗ ಮಾಡಬೇಕು. ದಯೆ ಇರಬೇಕು. ಅಹಂಕಾರ- ಮಮಕಾರಗಳನ್ನು ಬಿಡಬೇಕು. ಜನಗಳನ್ನು ಹೆದರಿಸಬಾರದು. ತಾನೂ ಜನಕ್ಕೆ ಹೆದರಬಾರದು.

ಹರ್ಷ, ಕೋಪ, ಭಯ, ಉದ್ವೇಗಗಳನ್ನು ಬಿಟ್ಟಿರಬೇಕು. ಕರ್ಮಗಳನ್ನು ಮಾಡುವಾಗ ಫಲಾಪೇಕ್ಷೆಯನ್ನು ಬಿಟ್ಟಿರಬೇಕು. ದೇಹವನ್ನೂ ಮನಸ್ಸನ್ನೂ ಶುದ್ಧವಾಗಿ ಇಟ್ಟುಕೊಳ್ಳಬೇಕು. ಕಾರ್ಯದಕ್ಷತೆ ಬೇಕು. ಹಿಂದಿನ ದುಃಖಗಳನ್ನು ನೆನಸಿಕೊಂಡು ವ್ಯಥೆ ಪಡುತ್ತಾ ಇರಬಾರದು. ವೈಷ್ಣವಕರ್ಮಗಳನ್ನು ಬಿಟ್ಟು ಮತ್ತಾವ ಕರ್ಮಗಳನ್ನೂ ಆರಂಭಿಸಬಾರದು.

ಶುಭಾಶುಭಗಳಲ್ಲಿ ಅಭಿಮಾನತ್ಯಾಗ ಮಾಡುವ ಮೂಲಕ ಇಚ್ಛಾ, ದ್ವೇಷ, ಹರ್ಷ, ಶೋಕ ಇವುಗಳನ್ನು ಬಿಡಬೇಕು.

ಶತ್ರುಗಳನ್ನೂ ಮಿತ್ರರನ್ನೂ ಮಾನ,ಅಪಮಾನಗಳನ್ನೂ ಸುಖ-ದುಃಖಗಳನ್ನೂ ನಿಂದಾ, ಸ್ತುತಿಗಳನ್ನೂ ಸಮವಾಗಿ ಕಾಣಬೇಕು. ಶಾಸ್ತ್ರಾರ್ಥ ಮನನ ಮಾಡುತ್ತಿರಬೇಕು. ಭಗವಂತನೇ ಆಶ್ರಯನೆಂದು ನಂಬಿರಬೇಕು. ಸ್ಥಿರವಾದ ಬುದ್ಧಿ ಇರಬೇಕು.

ಧರ್ಮದಿಂದ ಕೂಡಿದ ಮೋಕ್ಷಕ್ಕೆ ಸಾಧನವಾದ ಈ ನನ್ನ ಮಾತನ್ನು ನಂಬಿದವರು ನನ್ನ ಪ್ರೀತಿಪಾತ್ರರಾಗುತ್ತಾರೆ. ಮೇಲೆ ಹೇಳಿದ ಎಲ್ಲಕ್ಕಿಂತಲೂ ನನ್ನ ಪ್ರೀತಿಸಾಧನ ಭಕ್ತಿ. ಭಕ್ತರು ನನಗೆ ತುಂಬಾ ಪ್ರೀತಿಪಾತ್ರರು'.

ಹೀಗೆ ಈ ಅಧ್ಯಾಯದಲ್ಲಿ ಅವ್ಯಕ್ತೋಪಾಸನೆಗಿಂತ ಭಗವದುಪಾಸನೆ ಶ್ರೇಷ್ಠವೆಂದು ಮೋಕ್ಷಸಾಧನೆಗಳಲ್ಲಿ ಭಗವದ್ಭಕ್ತಿಯೇ ಮಿಗಿಲಾದ ಸಾಧನೆಯೆಂದು ಹೇಳಲಾಗಿದೆ.

## ತ್ರಯೋದಶಾಧ್ಯಾಯ ಸಾರ

ಕಡೆಯ ಆರು ಅಧ್ಯಾಯಗಳಲ್ಲಿ ಹಿಂದೆ ಹೇಳಿದ ಜ್ಞಾನ, ಹಾಗೂ ಜ್ಞಾನಸಾಧನೆಗಳನ್ನು ಶ್ರೀಕೃಷ್ಣನು ವಿಶದ ಪಡಿಸುತ್ತಾನೆ.

ಆರಂಭದಲ್ಲಿ ಅರ್ಜುನರು ಶ್ರೀಕೃಷ್ಣನನ್ನು 'ಪ್ರಕೃತಿ, ಪುರುಷ, ಕ್ಷೇತ್ರ, ಕ್ಷೇತಜ್ಞ, ಜ್ಞಾನ, ಜ್ಞೇಯ ಇವುಗಳನ್ನು ತಿಳಿಯಲು ಇಚ್ಛಿಸುತ್ತೇನೆ 'ಎಂದು ಪ್ರಾರ್ಥಿಸಿದರು. ಆಗ ಶ್ರೀಕೃಷ್ಣನು ಕ್ರಮವಾಗಿ ಅವುಗಳನ್ನು ಉಪದೇಶಿಸಲು ಆರಂಭಿಸಿದನು.

'ಜೀವರಿಗೆ ಸಂಸಾರದ ಮೂಲಕ ಹಿಂಸಕವಾದ್ದರಿಂದ ಪ್ರಕೃತ್ಯಾದಿಗಳು 'ಶರ' ಎನಿಸುತ್ತವೆ. ಇವು ಭಗವಂತನಿಂದ ಪ್ರೇರಿತವಾದ್ದರಿಂದ 'ಈರ' ಎನಿಸುತ್ತವೆ. ಹೀಗೆ ಶರೀರಶಬ್ದವಾಚ್ಯವಾದ ಪ್ರಕೃತ್ಯಾದಿಗಳಿಗೆ 'ಕ್ಷೇತ್ರ' ಎಂದು ಹೆಸರು. ಎಲ್ಲ ಕ್ಷೇತ್ರಗಳಲ್ಲೂ ಇದ್ದು ಅದನ್ನು ಬಲ್ಲ ನನ್ನನ್ನು 'ಕ್ಷೇತ್ರಜ್ಞ' ಎಂದು ತಿಳಿ. ಆ ಕ್ಷೇತ್ರದ ಪ್ರಕಾರಗಳನ್ನೂ ವಿಕಾರಗಳನ್ನೂ ತಿಳಿಸುತ್ತೇನೆ. ಮಹತ್ತತ್ತ್ವ, ಅಹಂಕಾರತತ್ತ್ವ ಬುದ್ಧಿ, ಮನಸ್ಸು ಹತ್ತು ಇಂದ್ರಿಯಗಳು, ಪಂಚತನ್ಮಾತ್ರೆಗಳು, ಪಂಚಭೂತಗಳು, ಇವೆಲ್ಲವೂ ಕ್ಷೇತ್ರದ ಪ್ರಕಾರಗಳು. ಇಚ್ಛಾ, ದ್ವೇಷ, ಸುಖ, ದುಃಖ, ದೇಹ, ಮನಸ್ಸಿನ ವ್ಯಾಪ್ತಿ,ಧಾರಣಾಶಕ್ತಿ ಇವೆಲ್ಲವೂ ಕ್ಷೇತ್ರದ ವಿಕಾರಗಳು.

ನಾನು ಮುಂದೆ ಉಪದೇಶಿಸುವ ಜ್ಞಾನವು ಸಿದ್ಧಿಸಬೇಕಾದರೆ ಅದಕ್ಕೆ ಬೇಕಾದ ಸಾಧನೆಗಳನ್ನು ಹೇಳುತ್ತೇನೆ ಕೇಳು. ನಮ್ಮಲ್ಲಿ ಇಲ್ಲದೇ ಇರುವ ಗುಣವನ್ನು ಇದೆ ಎಂದು ತಿಳಿಯುವುದಕ್ಕೆ 'ಮಾನ' ಎನ್ನುತ್ತಾರೆ. ಅದನ್ನು ಬಿಡಬೇಕು. ನಾವು ಅಲ್ಪರು ಎಂದು ತಿಳಿದಿದ್ದರೂ ಸಹ ದೊಡ್ಡಸ್ತಿಕೆ ತೋರಿಸುವುದಕ್ಕೆ 'ದಂಭ' ಎಂದು ಹೆಸರು. ಇಂತಹ ದಂಭವನ್ನು ಬಿಡಬೇಕು. ದೈಹಿಕ, ಕಾಯಿಕ, ಮತ್ತು ವಾಚನಿಕ ಹಿಂಸೆಗಳನ್ನು ಬಿಡಬೇಕು. ಇನ್ನೊಬ್ಬರು ನಮಗೆ ಮಾಡಿದ ತಪ್ಪನ್ನು ಸಹಿಸುವ 'ಕ್ಷಮೆ' ಎಂಬ ಗುಣವನ್ನು ಬೆಳೆಸಿಕೊಳ್ಳಬೇಕು. ಮನಸ್ಸಿನಲ್ಲಿ ಇಚ್ಛಿಸಿದಂತೆ ನುಡಿಯಬೇಕು; ನುಡಿದಂತೆ ನಡೆಯಬೇಕು. ಗುರುಗಳ ಸೇವೆ ಮಾಡಬೇಕು. ಮೃತ್ತಿಕೆ ಮತ್ತು ಜಲಗಳಿಂದ ಬಾಹ್ಯಶೌಚವನ್ನೂ, ರಾಗ-ದ್ವೇಷಗಳನ್ನು ಬಿಟ್ಟು ಅಂತಃಶೌಚವನ್ನೂ ಸಂಪಾದಿಸಬೇಕು. ಎಷ್ಟೇ ಕಷ್ಟ ಬಂದರೂ ವೈಷ್ಣವಮಾರ್ಗ ಬಿಟ್ಟು ಹೋಗಬಾರದು.

ಮನೋನಿಗ್ರಹ ಮಾಡಬೇಕು. ಆದಷ್ಟೂ ಏಕಾಂತದಲ್ಲಿ ವಾಸ ಮಾಡಬೇಕು. ಜನಗಳ ಗುಂಪಿಗೆ ಸೇರಬಾರದು. ಇಂದ್ರಿಯವಿಷಯಗಳಲ್ಲಿ ವೈರಾಗ್ಯ ಇರಬೇಕು. ಅಹಂಕಾರ ಬಿಟ್ಟಿರಬೇಕು. ಜನ್ಮ, ಮರಣ, ಮುಪ್ಪು, ರೋಗ ಇವುಗಳಲ್ಲಿರುವ ದುಃಖಗಳನ್ನು ಅನುಸಂಧಾನ ಮಾಡುತ್ತಿರಬೇಕು. ಅಧ್ಯಾತ್ಮಜ್ಞಾನದಲ್ಲಿ ನಿರತನಾಗಿರಬೇಕು. ತತ್ತ್ವ ಜ್ಞಾನಕ್ಕೋಸ್ಕರ ಶಾಸ್ತ್ರವಿಚಾರ ಮಾಡುತ್ತಿರಬೇಕು. ಇಷ್ಟಾನಿಷ್ಟಗಳು ಒದಗಿದಾಗ ಹಿಗ್ಗು, ಕುಗ್ಗು ಇಲ್ಲದಂತೆ ಸಮವಾಗಿರಬೇಕು. ನನ್ನಲ್ಲೇ ಪ್ರಧಾನವಾಗಿ ಭಕ್ತಿಯನ್ನು ಮಾಡಬೇಕು. ಇದೆಲ್ಲ ಜ್ಞಾನಕ್ಕೆ ಸಾಧನ. ಇದಕ್ಕೆ ವಿರುದ್ಧವಾದದ್ದೆಲ್ಲ ಅಜ್ಞಾನಕ್ಕೆ ಸಾಧನ.

ಇನ್ನು ಮುಂದೆ ಜ್ಞೇಯವನ್ನು ಹೇಳುತ್ತೇನೆ. ಅದನ್ನು ತಿಳಿದರೆ ನಿನಗೆ ಎಲ್ಲ ಅಮಂಗಳವೂ ಪರಿಹಾರವಾಗುತ್ತದೆ.

ಜ್ಞೇಯನಾದ ಭಗವಂತನಿಗೆ ಎಲ್ಲ ಕಡೆಯಲ್ಲೂ ಕೈ, ಕಾಲು, ಕಣ್ಣು, ಮುಖ, ತಲೆ, ಮೊದಲಾದ ಎಲ್ಲಾ ಅವಯವಗಳಿವೆ. ಎಲ್ಲಾ ಇಂದ್ರಿಯಗಳಿಂದ ಎಲ್ಲಾ ಇಂದ್ರಿಯಗಳ ವ್ಯಾಪಾರವನ್ನು ಮಾಡಲು ಸಮರ್ಥ. ಮೇಲಿದ್ದು ಎಲ್ಲವನ್ನೂ ಸಾಕ್ಷಿಯಾಗಿ ನೋಡುತ್ತಾನೆ. ಸರ್ವಜ್ಞ. ಸರ್ವಸಾರಭೋಕ್ತ. ಪ್ರಾಕೃತೇಂದ್ರಿಯರಹಿತ. ಸತ್ತ್ವ, ರಜಸ್, ತಮಸ್ ಎಂಬ ಪ್ರಕೃತಿಗುಣರಹಿತ. ಎಲ್ಲರ ಒಳಗೂ ಹೊರಗೂ ವ್ಯಾಪಿಸಿದವನು. ಸೂಕ್ಷ್ಮನಾದ್ದರಿಂದ ಚೆನ್ನಾಗಿ ತಿಳಿಯಲು ಅಶಕ್ಯನು. ಹತ್ತಿರಕ್ಕೆ ಹತ್ತಿರವೂ ಇದ್ದಾನೆ. ದೂರಕ್ಕೆ ದೂರವೂ ಇದ್ದಾನೆ. ಎಲ್ಲ ಜಗತ್ತಿನ ಸೃಷ್ಟಿಯನ್ನೂ, ಲಯವನ್ನೂ ಮಾಡುತ್ತಾನೆ. ಎಲ್ಲರನ್ನೂ ಧಾರಣೆ ಪೋಷಣೆ ಮಾಡತಕ್ಕವನು. ಸೂರ್ಯ ಚಂದ್ರಾದಿ ಎಲ್ಲ ಜ್ಯೋತಿಗಳಿಗೂ ಪ್ರಕಾಶನಶಕ್ತಿಯನ್ನು ಕೊಡತಕ್ಕವನು. ಜ್ಞಾನರೂಪಿ. ಸಮಸ್ತವೇದಪ್ರತಿಪಾದ್ಯ. ಜ್ಞಾನಗಮ್ಯ. ಎಲ್ಲರ ಹೃದಯದಲ್ಲೂ ನಿಯಾಮಕನಾಗಿ ಇರುತ್ತಾನೆ. ಅವನನ್ನೇ ಪರಮಾತ್ಮ ಎನ್ನುತ್ತಾರೆ.

ಪ್ರಕೃತಿಯಲ್ಲಿ ಜಡಪ್ರಕೃತಿ ಚಿತ್‌ಪ್ರಕೃತಿ ಎಂದು ಎರಡುಬಗೆ ಇದೆ. ಚಿತ್‌ಪ್ರಕೃತಿಯಾದ ಲಕ್ಷ್ಮೀದೇವಿಯಿಂದ ಪ್ರೇರಿತವಾದ ತ್ರಿಗುಣಾತ್ಮಕಜಡಪ್ರಕೃತಿಯಿಂದ ಎಲ್ಲಾ ಪದಾರ್ಥಗಳೂ ಉತ್ಪನ್ನವಾಗಿವೆ. ಪುರುಷರಲ್ಲೂ ಎರಡುಬಗೆ. ಸ್ವತಂತ್ರಪುರುಷ ಪರಮಾತ್ಮ. ಬ್ರಹ್ಮಾದಿ ಎಲ್ಲರೂ ಅಸ್ವತಂತ್ರಪುರುಷರು. ದೇಹ-ಇಂದ್ರಿಯಾದಿ ಎಲ್ಲಾ ವ್ಯಾಪಾರವನ್ನು ಮಾಡಿಸತಕ್ಕವರು ರಮಾದೇವಿ.ಆ ಕರ್ಮಗಳ ಫಲವನ್ನು ಉಣಿಸತಕ್ಕವನು ಭಗವಂತ.

ಪ್ರಕೃತಿನಿರ್ಮಿತವಾದ ದೇಹದಲ್ಲಿ ಜೀವನು ಇದ್ದು ತನ್ನ ಶುಭಾಶುಭಕರ್ಮಗಳ ಫಲವಾಗಿ ಸುಖ,ದುಃಖಗಳನ್ನು ಅನುಭವಿಸುತ್ತಿದ್ದಾನೆ. ಇದಕ್ಕೆ ಕಾರಣವೇನೆಂದರೆ ಶಬ್ದಾದಿವಿಷಯಗಳಲ್ಲಿರುವ ಆಸಕ್ತಿ. ಈ ವಿಷಯಸಂಗ್ರಹದಿಂದ ಉತ್ತಮವಾದ ಮತ್ತು ನೀಚವಾದ ಯೋನಿಗಳಲ್ಲಿ ಹುಟ್ಟುತ್ತಾನೆ.

ಇಂತಹ ಪ್ರಕೃತಿ,ಪುರುಷರ ಜ್ಞಾನವನ್ನು ಪಡೆದವನು ಸಂಸಾರದಿಂದ ಮುಕ್ತನಾಗುತ್ತಾನೆ.

ಇಂತಹ ಮುಕ್ತಿಗೆ ಕಾರಣವಾದದ್ದು ಭಗವಂತನ ದರ್ಶನ. ಕೆಲವು ಯೋಗಿಗಳು ಧ್ಯಾನಯೋಗದಿಂದ ಹೃದಯದಲ್ಲಿ ಭಗವಂತನನ್ನು ಕಾಣುತ್ತಾರೆ. ಕೆಲವರು ಜ್ಞಾನಯೋಗದಿಂದ ಭಗವಂತನನ್ನು ಕಾಣುತ್ತಾರೆ. ರಾಜರ್ಷಿಗಳು ಅಶ್ವಮೇಧಾದಿಯಾಗಗಳನ್ನು ಮಾಡಿ ಆ ಯಾಗಫಲವನ್ನು ಸ್ವೀಕರಿಸಲು ಬಂದಿರುವ ಭಗವಂತನನ್ನು ಕಾಣುತ್ತಾರೆ. ಮನುಷ್ಯರೇ ಮೊದಲಾದವರು ದೊಡ್ಡವರಿಂದ ತತ್ತ್ವಶ್ರವಣ ಮಾಡಿ ಉಪಾಸನೆ ಮಾಡುತ್ತಾರೆ. ಅವರೂ ಸಹ ತಮಗೆ ಯೋಗ್ಯವಾದ ಭಗವಂತನ ರೂಪವನ್ನು ಕಂಡು ಮುಕ್ತರಾಗುತ್ತಾರೆ.

ಎಲ್ಲಾ ಚರಾಚರಪ್ರಾಣಿಗಳೂ ಪ್ರಕೃತಿ ಮತ್ತು ಪುರುಷರ ಸಂಯೋಗದಿಂದ ಹುಟ್ಟುತ್ತಿದೆ. ಈ ಎಲ್ಲಾ ಪ್ರಾಣಿಗಳಲ್ಲಿ ಭಗವಂತನು ಇದ್ದರೂ ಅವುಗಳಿಗೆ ನಾಶವಾದರೂ ತಾನು ನಾಶವಾಗುವುದಿಲ್ಲ. ಹೀಗೆ ತಿಳಿದವನೇ ಜ್ಞಾನಿ. ಸ್ವತಂತ್ರಕರ್ತನಾದ ಭಗವಂತನ ಪ್ರೇರಣೆ, ಭಗವದಧೀನರಾದ ರಮಾದೇವಿಯರ ಪ್ರೇರಣೆಗಳಿಂದ ಜಡಪ್ರಕೃತಿಯ ವಿಕಾರರೂಪವಾದ ಎಲ್ಲ ಕರ್ಮಗಳೂ ಹುಟ್ಟುತ್ತವೆ. ಹೀಗೆ ತಿಳಿದು ಜೀವನು ಅಸ್ವತಂತ್ರಕರ್ತನೆಂದು ಯಾರು ತಿಳಿಯುತ್ತಾರೋ ಅವನೇ ಜ್ಞಾನಿ.

ಭಗವಂತನು ಅನಾದಿಯಾದ್ದರಿಂದ ಹಾಗೂ ತ್ರಿಗುಣಸಂಬಂಧರಹಿತನಾದ್ದರಿಂದ ನಾಶರಹಿತನಾಗಿದ್ದಾನೆ. ಆಕಾಶವು ಎಲ್ಲಕಡೆ ಇದ್ದರೂ ಅದಕ್ಕೆ ಹೇಗೆ ಲೇಪವಿಲ್ಲವೋ ಹಾಗೆ ಪರಮಾತ್ಮನು ಎಲ್ಲಕಡೆ ಇದ್ದು ಎಲ್ಲ ವ್ಯಾಪಾರ ಮಾಡಿಸುತ್ತಿದ್ದರೂ ಸಹ ಲೇಪರಹಿತನಾಗಿದ್ದಾನೆ. ಸೂರ್ಯನು ಹೇಗೆ ಎಲ್ಲವನ್ನೂ ಪ್ರಕಾಶಿಸುತ್ತಿದ್ದಾನೋ ಹಾಗೆ ಕ್ಷೇತ್ರಜ್ಞನಾದ ಭಗವಂತನು ಎಲ್ಲ ಕ್ಷೇತ್ರವನ್ನು ಪ್ರಕಾಶಪಡಿಸುತ್ತಾನೆ.

ಹೀಗೆ ಕ್ಷೇತ್ರ-ಕ್ಷೇತ್ರಜ್ಞರ ವಿಭಾಗವನ್ನು ತಿಳಿದವನು ಉತ್ತಮಗತಿಯನ್ನು ಪಡೆಯುತ್ತಾನೆ.

## ಚತುರ್ದಶಾಧ್ಯಾಯದ ಸಾರ

ಹೀಗೆ ಕ್ಷೇತ್ರ-ಕ್ಷೇತ್ರಜ್ಞವಿಭಾಗವನ್ನು ಉಪದೇಶ ಮಾಡಿದ ಮತ್ತೆ ಶ್ರೀಕೃಷ್ಣನು ಉತ್ತಮವಾದ ಜ್ಞಾನವನ್ನು ಉಪದೇಶ ಮಾಡುತ್ತೇನೆ ಎಂದು ಹೇಳುತ್ತಾನೆ.

'ಹೇ! ಅರ್ಜುನ, ನನ್ನ ಪತ್ನಿ ರಮಾದೇವಿ. ಆಕೆಯಲ್ಲಿ ನಾನು ಗರ್ಭಾಧಾನ ಮಾಡುತ್ತೇನೆ. ಅದರಿಂದ ಎಲ್ಲ ಭೂತಗಳ ಉತ್ಪತ್ತಿ ಆಗುತ್ತದೆ. ಹೀಗೆ ಮೂಲ ಸೃಷ್ಟಿಯಲ್ಲಿ ಮಾತ್ರವಲ್ಲ, ಅವಾಂತರ ಸೃಷ್ಟಿಗಳಲ್ಲೂ ಸಹ ನಾವಿಬ್ಬರೇ ಪುರುಷ - ಸ್ತ್ರೀಯರಲ್ಲಿ ಅಂತರ್ಗತರಾಗಿ ಸೃಷ್ಟಿಯನ್ನು ಮಾಡುತ್ತೇವೆ'.

ಹೀಗೆ ಸರ್ವಸೃಷ್ಟಿಕರ್ತೃತ್ವ ಎಂಬ ತನ್ನ ಮಹಿಮೆಯನ್ನು ಹೇಳಿ, ಜೀವರ ಬಂಧಪ್ರಕಾರವನ್ನು ವರ್ಣನೆ ಮಾಡುತ್ತಾನೆ.

'ಸತ್ತ್ವ, ರಜಸ್ಸು, ತಮಸ್ಸು ಎಂದು ಪ್ರಕೃತಿಯ ಮೂರು ಗುಣಗಳಿವೆ. ಈ ಮೂರುಗುಣಗಳಿಗೆ ಕ್ರಮವಾಗಿ ಶ್ರೀ, ಭೂ, ದುರ್ಗಾದೇವಿಯರು ಅಭಿಮಾನಿಯಾಗಿದ್ದಾರೆ. ಸ್ವತಂತ್ರಕಾರಣನಾದ ನನ್ನಿಂದಾಗಿ ಈ ಮೂರುದೇವಿಯರ ಪ್ರೇರಣೆಯಿಂದ ಮೇಲೆ ಹೇಳಿದ ಮೂರುಗುಣಗಳು ಜೀವರಿಗೆ ಬಂಧಕವಾಗಿದೆ. ದೇವತೆಗಳು, ಮನುಷ್ಯರು, ದೈತ್ಯರು ಸಾತ್ತ್ವಿಕ, ರಾಜಸ,ತಾಮಸ ಎಂದು ಜೀವರೂ ಸಹ ತ್ರಿವಿಧರು. ಮೂರುಗುಣಗಳೂ ಮೂರುಜೀವರಿಗೂ ಬಂಧಕ. ಹೀಗಿದ್ದರೂ ಸತ್ತ್ವಗುಣವು ವಿಶೇಷವಾಗಿ ದೇವತೆಗಳಿಗೆ ಬಂಧಕ. ರಜೋಗುಣವು ಮನುಷ್ಯರಿಗೆ ಬಂಧಕ. ತಮೋಗುಣವು ದೈತ್ಯರಿಗೆ ಬಂಧಕ.

ಸತ್ತ್ವಗುಣವು ಸುಖ, ಜ್ಞಾನಗಳ ಮೂಲಕ ಬಂಧಕವಾಗುತ್ತದೆ. ರಜೋಗುಣವು ರಾಗ-ದ್ವೇಷಗಳ ಮೂಲಕ ಬಂಧಕ. ತಮೋಗುಣವು ನಿದ್ರಾ, ಆಲಸ್ಯ, ಪ್ರಮಾದಗಳಿಂದ ಬಂಧಕ. ಯಾವಾಗ ಎಲ್ಲ ಇಂದ್ರಿಯಗಳು ಜಾಗೃತವಾಗಿವೆಯೋ ಇಂದ್ರಿಯಗಳಲ್ಲಿ ಪ್ರಕಾಶವುಂಟಾಗುತ್ತದೋ ಹಾಗೂ ಮನಸ್ಸಿನಲ್ಲಿ ಸುಖವು ಉಂಟಾಗುವುದೋ ಆಗ ಸತ್ತ್ವಗುಣವು ಅಭಿವೃದ್ಧಿಯಾಗಿದೆ ಎಂದು ತಿಳಿಯಬೇಕು. ಯಾವಾಗ ರಾಗ ದ್ವೇಷಗಳ ಮೂಲಕ ನಾನಾವಿಧವಾದ ಪ್ರವೃತ್ತಿಯುಂಟಾಗುತ್ತದೋ ಆಗ ರಜೋಗುಣವು ಅಭಿವೃದ್ಧಿಯಾಗಿದೆ ಎಂದು ತಿಳಿಯಬೇಕು. ಯಾವಾಗ ಮೋಹ ಉಂಟಾಗಿದೆಯೋ ಆಗ ತಮೋಗುಣವು ಅಭಿವೃದ್ಧಿಯಾಗಿದೆ ಎಂದು ತಿಳಿಯಬೇಕು.

ಒಮ್ಮೆ ಸತ್ತ್ವಗುಣವು ಅಭಿವೃದ್ಧಿಯಾಗಿ ರಜೋಗುಣ,ತಮೋಗುಣಗಳನ್ನು ಕೆಳಗೆ ಮಾಡುತ್ತದೆ. ಒಮ್ಮೆ ರಜೋಗುಣವು ಅಭಿವೃದ್ಧಿಯಾಗಿ ಸತ್ತ್ವಗುಣ,ತಮೋಗುಣಗಳನ್ನು ಕೆಳಗೆ ಮಾಡುತ್ತದೆ. ಒಮ್ಮೆ ತಮೋಗುಣವು ಅಭಿವೃದ್ಧಿಯಾಗಿ ಸತ್ತ್ವಗುಣ, ರಜೋಗುಣಗಳನ್ನು ಕೆಳಗೆ ಮಾಡುತ್ತದೆ. ಸತ್ತ್ವಗುಣದಿಂದ ಜಾಗ್ರದವಸ್ಥೆ. ರಜೋಗುಣದಿಂದ ಸ್ವಪ್ನಾವಸ್ಥೆ. ತಮೋಗುಣದಿಂದ ನಿದ್ರಾವಸ್ಥೆಗಳು ಉಂಟಾಗುತ್ತವೆ. ಸತ್ತ್ವಗುಣದಿಂದ ಬ್ರಹ್ಮಲೋಕದವರೆಗೆ ಮೇಲೆ ಮೇಲೆ ಹೋಗಬಹುದು. ರಜೋಗುಣದಿಂದ ಭೂಮಿಯಲ್ಲಿ ತಿರುಗುತ್ತಿರುತ್ತಾರೆ. ತಮೋಗುಣದಿಂದ ತಮಸ್ಸಿನವರೆಗೆ ಕೆಳಕೆಳಗೆ ಹೋಗುತ್ತಾರೆ.

ಸತ್ತ್ವಗುಣವು ಅಭಿವೃದ್ಧಿಯಾದಾಗ ದೇಹವನ್ನು ಬಿಟ್ಟವರು ಮೇಲಿನ ಲೋಕಗಳಿಗೆ ಹೋಗುತ್ತಾರೆ. ರಜೋಗುಣವು ಅಭಿವೃದ್ಧಿಯಾದಾಗ ದೇಹವನ್ನು ಬಿಟ್ಟವರು ಮನುಷ್ಯನಲ್ಲೇ ಹುಟ್ಟುತ್ತಾರೆ. ತಮೋಗುಣವು ಅಭಿವೃದ್ಧಿಯಾದಾಗ ದೇಹವನ್ನು ಬಿಟ್ಟವರು ಪಶು, ಪಕ್ಷಿಗಳಾಗಿ ಹುಟ್ಟುತ್ತಾರೆ.

ಹೀಗೆ ಬಂಧದ ವಿಚಾರವನ್ನು ಉಪದೇಶ ಮಾಡಿದಾಗ ಅರ್ಜುನರು ಪ್ರಶ್ನೆ ಮಾಡುತ್ತಾರೆ. ಸ್ವಾಮಿ ! ಈ ಮೂರುಗುಣಗಳನ್ನು ಮೀರಿದವರ ಲಕ್ಷಣವೇನು? ಈ ಮೂರುಗುಣಗಳನ್ನು ಮೀರಿ ಮುಕ್ತನಾಗುವ ಬಗೆ ಹೇಗೆ?

ಇದಕ್ಕೆ ಉತ್ತರವಾಗಿ ಶ್ರೀಕೃಷ್ಣನು ಮೊದಲು ತ್ರಿಗುಣಾತೀತನ ಲಕ್ಷಣವನ್ನು ಹೇಳುತ್ತಾನೆ. ಹಿಂದೆ ಹೇಳಿದಂತೆ ಮೂರುಗುಣಗಳು ಕ್ರಮವಾಗಿ ಪ್ರಕಾಶ,ಪ್ರವೃತ್ತಿ ಮತ್ತು ಮೋಹಕ್ಕೆ ಕಾರಣವಾದದ್ದು. ಹೀಗೆ ಪ್ರಕಾಶ,ಪ್ರವೃತ್ತಿ ಮತ್ತು ಮೋಹಗಳು ಉಂಟಾದಾಗ ಯಾರು ಅವುಗಳನ್ನು ದ್ವೇಷಿಸುವುದಿಲ್ಲವೋ ಹಾಗೂ ಪ್ರಕಾಶ,ಪ್ರವೃತ್ತಿ ಮತ್ತು ಮೋಹಗಳು ಉಂಟಾಗದಿದ್ದಾಗ ಅವುಗಳನ್ನು ಅಪೇಕ್ಷಿಸುವುದಿಲ್ಲವೋ ಅವನು ತ್ರಿಗುಣಾತೀತ ಎಂದು ತಿಳಿಯಬೇಕು.

ಫಲಾಸಕ್ತಿಯನ್ನು ಬಿಟ್ಟು ಉದಾಸೀನತೆಯಿಂದ ಇದ್ದು ಯಾರು ಈ ಮೂರುಗುಣಗಳಿಂದ ಚಂಚಲರಾಗುವುದಿಲ್ಲವೋ ಅವನು ತ್ರಿಗುಣಾತೀತನೆಂದು ತಿಳಿಯಬೇಕು. ಯಾರು ಎಲ್ಲಾ ಇಂದ್ರಿಯಗಳನ್ನು ಜಯಿಸಿ, ಸುಖ-ದುಃಖ, ಮಾನ-ಅವಮಾನ, ಲಾಭ-ನಷ್ಟ, ನಿಂದಾ-ಸ್ತುತಿ, ಜಯ-ಅಪಜಯ ಮೊದಲಾದ ದ್ವಂದ್ವಗಳು ಬಂದಾಗ ಹಿಗ್ಗುವುದಿಲ್ಲವೋ ಕುಗ್ಗುವುದಿಲ್ಲವೋ ಆತತನ್ನು ತ್ರಿಗುಣಾತೀತ ಎನ್ನುತ್ತಾರೆ.

ಯಾರು ನನ್ನನ್ನು ನಿರಂತರ ಭಕ್ತಿಯೋಗದಿಂದ ಸೇವಿಸುತ್ತಾರೋ ಅವರು ಬಂದು ಲಕ್ಷ್ಮೀದೇವಿಯನ್ನು ಸೇರುತ್ತಾರೆ. ಲಕ್ಷ್ಮೀದೇವಿಯನ್ನು ಸೇರಿದರೆ ನನ್ನನ್ನು ಸೇರಿದಂತೆಯೇ ಆಗುತ್ತದೆ. ಏಕೆಂದರೆ ನಾನು ಲಕ್ಷ್ಮೀದೇವಿಗೂ ಆಶ್ರಯ. ಎಂದರೆ ಭಕ್ತಿಯೋಗದಿಂದ ನನ್ನ ಪ್ರಾಪ್ತಿರೂಪವಾದ ಮೋಕ್ಷವು ಆಗುತ್ತದೆ.

ಹೀಗೆ ಈ ಅಧ್ಯಾಯದಲ್ಲಿ ಭಗವಂತನ ಸೃಷ್ಟಿಕರ್ತೃತ್ವಮಹಿಮೆಯನ್ನು ಬಂಧ ಹಾಗೂ ಮೋಚನದ ಪ್ರಕಾರಗಳು ಹೇಳಲ್ಪಟ್ಟಿವೆ.

## ಪಂಚದಶಾಧ್ಯಾಯದ ಸಾರ

ಈ ಅಧ್ಯಾಯದಲ್ಲಿ ಶ್ರೀಕೃಷ್ಣನು ತನ್ನ ಸರ್ವೋತ್ತಮತ್ವರೂಪವಾದ ಮಹಿಮೆಯನ್ನು ಸ್ಪಷ್ಟಪಡಿಸುತ್ತಾನೆ.

ಜಗತ್ತು ಇಂದು ಇದ್ದಂತೆ ನಾಳೆ ಇರುವುದಿಲ್ಲ. ಆದ್ದರಿಂದ ಅದನ್ನು ಅಶ್ವತ್ಥವೃಕ್ಷ ಎನ್ನುತ್ತಾರೆ.

ಇದರ ಮೂಲ ಮೇಲೆ ಇದೆ. ಶಾಖೆಗಳು ಕೆಳಗೆ ಇವೆ. ಈ ಮಾತನ್ನು ತಪ್ಪು ತಿಳಿದು ಕೆಲವರು ಜಗದ್ವೃಕ್ಷವು ಬುಡಮೇಲಾಗಿರುವ ಒಂದು ವೃಕ್ಷ ಎನ್ನುವಂತೆ ಚಿತ್ರಗಳನ್ನು ಬರೆದಿರುತ್ತಾರೆ. ಇದು ಶುದ್ಧ ತಪ್ಪು. ಮೂಲ ಮೇಲಿದೆ , ಶಾಖೆ ಕೆಳಗಿದೆ ಎನ್ನುವುದಕ್ಕೆ ಅರ್ಥವು ಮುಂದೆ ತಿಳಿಸುವಂತೆ ಇದೆ.

ಜಗದ್ವೃಕ್ಷಕ್ಕೆ ಜಡಪ್ರಕೃತಿ, ಲಕ್ಷ್ಮೀದೇವಿ ಮತ್ತು ಭಗವಂತ ಎಂಬ ಮೂರು ಉತ್ತಮವಸ್ತುಗಳು ಆಧಾರವಾಗಿವೆ. ಈ ದೃಷ್ಟಿಯಿಂದ ಊರ್ಧ್ವಮೂಲ ಎನ್ನುತ್ತಾರೆ. ಮಹದಾದಿ ತತ್ತ್ವಗಳು ಹಾಗೂ ಬ್ರಹ್ಮಾದಿಚೇತನರೆಂಬ ಕಡಿಮೆಯಾದ ನಿಕೃಷ್ಟತತ್ತ್ವಗಳು ಮೇಲೆ ಹೇಳಿದ ಮೂರುತತ್ತ್ವಗಳನ್ನು ಆಶ್ರಯ ಮಾಡಿದ ಶಾಖೆಗಳಂತೆ ಇವೆ.

ಈ ಜಗದ್ವೃಕ್ಷವು ಪ್ರವಾಹತಃ ನಿತ್ಯವಾದದ್ದು. ಈ ವೃಕ್ಷದಲ್ಲಿ ಸಿಗುವ ಪ್ರವೃತ್ತಿಫಲ ಸ್ವರ್ಗಾದಿಗಳು ಮತ್ತು ನಿವೃತ್ತಿಫಲ ಮೋಕ್ಷ ಇವುಗಳಿಗೆ ಕಾರಣವಾದ ವೇದಗಳು ಎಲೆಯ ಸ್ಥಾನದಲ್ಲಿದೆ. ಎಲೆ ಇದ್ದರೆ ಹೇಗೆ ಹಣ್ಣುಬಿಡುತ್ತದೋ ಹಾಗೆ ವೇದೋಕ್ತಕರ್ಮಗಳಿಂದ ಮತ್ತು ಜ್ಞಾನದಿಂದ ಮೇಲೆ ಹೇಳಿದ ಫಲಗಳು ಸಿಗುತ್ತವೆ. ಇಂತಹ ಜಗದ್ವೃಕ್ಷವನ್ನು ತಿಳಿದವನೇ ವೇದವಿದ್ವಾಂಸ.

ಪ್ರಕೃತಿ, ಲಕ್ಷ್ಮೀ, ನಾರಾಯಣ ಎಂಬ ಮೂರು ಮೂಲಗಳು ಕೆಳಗಿನ ತತ್ತ್ವಗಳಾದ ಮಹದಾದಿಗಳು ಮತ್ತು ಬ್ರಹ್ಮಾದಿಗಳನ್ನು ನಿಯಾಮಕವಾಗಿ ಪ್ರವೇಶ ಮಾಡಿದೆ. ಈ ವೃಕ್ಷದಲ್ಲಿ ಶಬ್ದಾದಿವಿಷಯಗಳೇ ಚಿಗುರಿನಂತಿವೆ. ಚಿಗುರನ್ನು ಕಿತ್ತು ಹಾಕಿದರೆ ಹೇಗೆ ಫಲವು ಸಿಗಲಾರದೋ ಹಾಗೆ ವಿಷಯಾಸಕ್ತರಿಗೆ ಸ್ವರ್ಗ ಮೋಕ್ಷಗಳೆಂಬ ಫಲಗಳು ಸಿಗುವುದಿಲ್ಲ.

ಮಾನ ಮೋಹಗಳನ್ನು ಬಿಟ್ಟು ವಿಷಯಸಂಗವನ್ನು ತ್ಯಾಗ ಮಾಡಿ ನಿಷಿದ್ಧವಾದ ಇಚ್ಛೆಗಳನ್ನು ತ್ಯಜಿಸಿ ಸುಖ,

ದುಃಖಾದಿ ದ್ವಂದ್ವಗಳನ್ನು ಯಾರು ಮೀರುತ್ತಾರೋ ಅಂತಹವರು ಶಾಶ್ವತವಾದ ನನ್ನ ಸ್ಥಾನವನ್ನು ಪಡೆಯಬಹುದು. ಇದಕ್ಕಾಗಿ ಜಗತ್ತಿನ ಸಂಪರ್ಕವನ್ನು ಕಡಿದುಹಾಕಿಕೊಂಡು ನನಗೆ ಶರಣಾಗತರಾಗಬೇಕು.

ಈ ನನ್ನ ಸ್ವರೂಪವನ್ನು ಚಂದ್ರ, ಸೂರ್ಯ, ಅಗ್ನಿ ಯಾರೂ ಪ್ರಕಾಶಪಡಿಸಲಾರರು. ಇಂತಹ ನನ್ನ ಸ್ವರೂಪವನ್ನು ತಿಳಿದವರು ಮತ್ತೆ ಸಂಸಾರಕ್ಕೆ ಹಿಂತಿರುಗುವುದಿಲ್ಲ. ನನಗೆ ಪ್ರತಿಬಿಂಬನಾದ ಜೀವನು ನನ್ನ ಭಿನ್ನಾಂಶ ಎಂದು ಕರೆಸುತ್ತಾನೆ. ಈ ಜೀವನು ನನ್ನ ಅಧೀನನಾಗಿ ತನ್ನ ಮನಸ್ಸು ಮತ್ತು ಇಂದ್ರಿಯಗಳ ಸಮೇತ ದೇಹದಿಂದ ದೇಹಕ್ಕೆ ಹೋಗುತ್ತಾನೆ. ಪಂಚಜ್ಞಾನೇಂದ್ರಿಯಗಳು ಮತ್ತು ಮನಸ್ಸನ್ನು ಆಶ್ರಯಿಸಿ ವಿಷಯಭೋಗವನ್ನು ಮಾಡುತ್ತಾನೆ. ಹೀಗೆ ಪರಮಾತ್ಮನು ದೇಹದಲ್ಲಿ ಇದ್ದು ತಾನು ಶುಭಭಾಗವನ್ನು ಮಾತ್ರ ಭೋಜನ ಮಾಡುತ್ತಾನೆ. ಜೀವನಿಗೆ ಅವನ ಕರ್ಮಕ್ಕೆ ತಕ್ಕಂತೆ ಶುಭ ಅಶುಭ ಎರಡನ್ನೂ ಭೋಜನ ಮಾಡಿಸುತ್ತಾನೆ. ದೇಹದಿಂದ ದೇಹಕ್ಕೆ ಜೀವನನ್ನು ಒಯ್ಯುತ್ತಾನೆ. ಯಾರಿಗೆ ಇಂದ್ರಿಯಜಯವಿಲ್ಲವೋ ಅವರು ಪ್ರಯತ್ನ ಮಾಡಿದರೂ ಸಹ ಇಂತಹ ದೇವರ ಮಹಿಮೆಯನ್ನು ತಿಳಿಯಲಾರರು. ಯೋಗಿಗಳು ಎಲ್ಲ ಇಂದ್ರಿಯವನ್ನು ನಿಗ್ರಹಿಸಿ ಪ್ರಯತ್ನಪೂರ್ವಕವಾಗಿ ತಮ್ಮ ಯೋಗ್ಯತೆ ಇದ್ದಷ್ಟು ಭಗವಂತನ ಮಹಿಮೆಯನ್ನು ತಿಳಿಯುತ್ತಾರೆ.

ಸೂರ್ಯ, ಚಂದ್ರ, ಅಗ್ನಿ ಇವರಲ್ಲಿರುವ ತೇಜಸ್ಸು ನನ್ನ ಅಧೀನ. ನಾನೇ ಭೂಮಿಯನ್ನು ಪ್ರವೇಶಿಸಿ ಎಲ್ಲವನ್ನೂ ಧರಿಸಿದ್ದೇನೆ. ಚಂದ್ರನಲ್ಲಿ ಇದ್ದು ನಾನೇ ಸಸ್ಯಗಳನ್ನು ಪೋಷಣೆ ಮಾಡುತ್ತೇನೆ. ನಾನೇ ಜಠರಾಗ್ನಿಯಲ್ಲಿ ವೈಶ್ವಾನರರೂಪದಿಂದ ಇದ್ದು ಪ್ರಾಣ, ಅಪಾನ ಎಂಬ ಎರಡುಪ್ರಾಣದೇವರ ರೂಪದ ಸಮೇತ ಭಕ್ಷ್ಯ=ತಿನ್ನತಕ್ಕ ಅನ್ನ ಮೊದಲಾದ್ದು, ಲೇಹ್ಯ=ಚಪ್ಪರಿಸತಕ್ಕ ಗೊಜ್ಜು ಮೊದಲಾದ್ದು, ಪೇಯ=ಕುಡಿಯುವ ನೀರು ಮೊದಲಾದ್ದು, ಚೋಷ್ಯ=ಹಲ್ಲಿಂದ ಕಡಿಯತಕ್ಕ ಚಕ್ಕುಲಿ ಮೊದಲಾದ್ದು ಎಂಬ ನಾಲ್ಕುವಿಧವಾದ ಪದಾರ್ಥಗಳನ್ನು ಪಚನ ಮಾಡುತ್ತೇನೆ.

ನಾನು ಎಲ್ಲರ ಹೃದಯದಲ್ಲೂ ಇದ್ದೇನೆ. ಸ್ಮರಣೆ, ವಿಸ್ಮರಣೆ, ಜ್ಞಾನ, ಅಜ್ಞಾನ ಎಲ್ಲವೂ ನನ್ನ ಅಧೀನ. ಸಮಸ್ತವೇದಗಳಿಂದ ಪ್ರತಿಪಾದ್ಯನು ನಾನೇ ಆಗಿದ್ದೇನೆ. ವೇದಾಂತಶಾಸ್ತ್ರವನ್ನು ವೇದವ್ಯಾಸರೂಪದಿಂದ ರಚನೆ ಮಾಡಿದ್ದೇನೆ. ಸಮಸ್ತವೇದವನ್ನೂ ಬಲ್ಲವನಾಗಿದ್ದೇನೆ.

ಲೋಕದಲ್ಲಿ ಕ್ಷರ ಅಕ್ಷರ ಎಂದು ಚೇತನರು ಎರಡುಬಗೆ. ದೇಹ ನಾಶವುಳ್ಳಬ್ರಹ್ಮಾದಿ ಚೇತನರು ಕ್ಷರಪುರುಷರು ಎನ್ನಿಸುತ್ತಾರೆ. ದೇಹ ನಾಶವಿಲ್ಲದ ರಮಾದೇವಿಯು ಅಕ್ಷರಪುರುಷ ಎನಿಸುತ್ತಾಳೆ. ಕ್ಷರಾಕ್ಷರಪುರುಷರಿಗಿಂತ ಉತ್ತಮನಾದ ಮತ್ತೊಬ್ಬ ಪರಮಪುರುಷ ಇದ್ದಾನೆ. ಅವನನ್ನೇ ಪರಮಾತ್ಮ ಎನ್ನುತ್ತಾರೆ. ಆತನು ಮೂರುಲೋಕವನ್ನೂ ಹೊಕ್ಕು ಧಾರಣೆ ಮಾಡಿದ್ದಾನೆ. ಜಗತ್ತು ನಾಶವಾದರೂ ಆತನಿಗೆ ನಾಶವಿಲ್ಲ. ಅಂತಹ ಸಾಮರ್ಥ್ಯವು ಆತನಿಗಿದೆ.

ಆ ಪರಮಾತ್ಮನು ಬೇರಾರೂ ಅಲ್ಲ. ಕ್ಷರಾಕ್ಷರಪುರುಷರನ್ನು ಮೀರಿದ ನಾನೇ ಆಗಿದ್ದೇನೆ. ಆದ್ದರಿಂದ ನನ್ನನ್ನು ವೇದಗಳು ಪೌರುಷೇಯ ಗ್ರಂಥಗಳೂ ಸಹ ಪುರುಷೋತ್ತಮ ಎಂದು ಕರೆಯುತ್ತವೆ. ಹೀಗೆ 'ನಾನೇ ದೇವರು,ಶಿವಾದಿಗಳು ವಿಷ್ಣುವಿಗೆ ಸಮಾನರು ಅಥವಾ ವಿಷ್ಣುವಿಗಿಂತ ಉತ್ತಮರು' ಇದೇ ಮೊದಲಾದ ಮೋಹರಹಿತರಾಗಿ ನನ್ನನ್ನೇ ಪುರುಷೋತ್ತಮ ಎಂದು ಯಾರು ತಿಳಿಯುತ್ತಾರೋ ಅವರು ಸರ್ವಜ್ಞರಂತೆ. ಏಕೆಂದರೆ ನನ್ನ ಸರ್ವೋತ್ತಮತ್ವವೇ ಸರ್ವಶಾಸ್ತ್ರದ ತಾತ್ಪರ್ಯ.

ಹೀಗೆ ನನ್ನ ಸರ್ವೋತ್ತಮತ್ವವನ್ನು ತಿಳಿದವರು ಸರ್ವಪ್ರಕಾರದಿಂದ ನನ್ನ ಭಜನೆ ಮಾಡಿದಂತೆ ಆಗುತ್ತದೆ. ಇದು ಅತಿರಹಸ್ಯವಾದ ಶಾಸ್ತ್ರ. ನೀನು ಪಾಪರಹಿತನಾದ್ದರಿಂದ ಹಾಗೂ ನನ್ನ ಪ್ರಿಯನಾದ್ದರಿಂದ ನಿನಗೆ ಹೇಳಿದ್ದೇನೆ. ಇದನ್ನು ಸಿಕ್ಕಸಿಕ್ಕವರಿಗೆ ಹೇಳಬಾರದು. ಈ ನನ್ನ ಸರ್ವೋತ್ತಮತ್ವವನ್ನು ತಿಳಿದರೆ ಆತನು ಅಪರೋಕ್ಷಜ್ಞಾನಿಯಾಗುತ್ತಾನೆ. ಮುಂದೆ ಮುಕ್ತನೂ ಆಗುತ್ತಾನೆ.

ಹೀಗೆ ಭಗವಂತನು ಈ ಅಧ್ಯಾಯದಲ್ಲಿ ಸುಸ್ಪಷ್ಟವಾಗಿ ತನ್ನ ಸರ್ವೋತ್ತಮತ್ವವನ್ನು ಸಾರಿ ಹೇಳಿದ್ದಾನೆ.

## ಷೋಡಶಾಧ್ಯಾಯ ಸಾರ

ಶ್ರೀಕೃಷ್ಣನು ಈ ಅಧ್ಯಾಯದಲ್ಲಿ ದೈವೀಸಂಪತ್ತು ಮತ್ತು ಆಸುರೀಸಂಪತ್ತುಗಳ ವಿಭಾಗವನ್ನು ಹೇಳುತ್ತಾನೆ.

'ಅಭಯ, ಮನಸ್ಸಿನಶುದ್ಧಿ, ಜ್ಞಾನಯೋಗದಲ್ಲಿನಿಷ್ಠೆ, ಅಹಿಂಸೆ, ಸತ್ಯ, ಸ್ವಶಾಖಾಧ್ಯಯನ, ಆರ್ಜವ, ಇಷ್ಟ-ಅನಿಷ್ಟಗಳು ಬಂದಾಗ ಸಮತ್ವ ಇವೇ ಮೊದಲಾದವು ದೈವೀಸಂಪತ್ತು. ಅಹಂಕಾರ, ಎಲ್ಲಿ ಬಲಪ್ರಯೋಗ ಮಾಡಬಾರದೋ ಅಲ್ಲಿ ಪ್ರಯೋಗ ಮಾಡುವ ಬಲ, ದರ್ಪ, ಕಾಮ, ಕ್ರೋಧ ಇವೇ ಮೊದಲಾದ್ದು ಆಸುರೀಸಂಪತ್ತು ಎನಿಸುತ್ತದೆ. ದೈವೀಸಂಪತ್ತು ವಿವಿಧ ಮೋಕ್ಷಕ್ಕೆ ಕಾರಣವಾಗುತ್ತದೆ. ಆಸುರೀಸಂಪತ್ತು ನೀಚಸ್ಥಾನದಲ್ಲಿ ಬಂಧನಕ್ಕೆ ಕಾರಣವಾಗುತ್ತದೆ. ಎಲೈ! ಅರ್ಜುನನೇ, ನೀನು ದೈವೀಸಂಪತ್ತಿನಿಂದ ಕೂಡಿರುತ್ತೀಯೆ. ಆದ್ದರಿಂದ ನೀನು ಆತಂಕಪಡಬೇಕಾದ್ದಿಲ್ಲ'.

'ದೈವೀಸಂಪತ್ತನ್ನು ವಿಸ್ತಾರವಾಗಿ ಹೇಳಿದ್ದೇನೆ. ಆಸುರೀಸಂಪತ್ತನ್ನು ವಿಸ್ತರಿಸಿ ಹೇಳುತ್ತೇನೆ ಕೇಳು. ಅಸುರರು ಏನನ್ನು ಮಾಡಬೇಕು, ಏನನ್ನು ಬಿಡಬೇಕು ಎಂಬುದನ್ನು ತಿಳಿದಿರುವುದಿಲ್ಲ. ಅವರಲ್ಲಿ ಸತ್ಯ, ಶೌಚ, ದಯಾ ಯಾವುದೂ ಇರುವುದಿಲ್ಲ. ಜಗತ್ತಿನ ಸೃಷ್ಟಿ, ಸ್ಥಿತಿ, ನಿಯಮನಗಳಿಗೆ ಕಾರಣನಾದ ಭಗವಂತನು ಇಲ್ಲ ಎನ್ನುತ್ತಾರೆ. ಜಗತ್ತು ಅಸತ್ಯ, ಬ್ರಹ್ಮಜ್ಞಾನವು ಬಂದಾಗ ಬಾಧ್ಯವಾಗುತ್ತದೆ. ಜೀವನಿಂದ ಭಿನ್ನನಾದ ಈಶ್ವರನಿಲ್ಲ. ವಸ್ತುತಃ ಆಕಾಶದಿಂದ ವಾಯು, ವಾಯುವಿನಿಂದ ತೇಜಸ್ಸು ಇತ್ಯಾದಿಕ್ರಮದಿಂದ ಜಗತ್ತು ಹುಟ್ಟುತ್ತದೆ. ಆದರೆ ಜಗತ್ತು ಸದಸದ್ವಿಲಕ್ಷಣ, ಅವಿದ್ಯಾಕಲ್ಪಿತ ಎನ್ನುತ್ತಾರೆ. ಈ ಎಲ್ಲಾ ಲಕ್ಷಣಗಳು ಅದ್ವೈತಮತದಲ್ಲಿ ಕಾಣುವುದರಿಂದ ಆ ಮತವು ಆಸುರಮತ ಎಂದು ಗೊತ್ತಾಗುತ್ತದೆ. ಇಂತಹ ದೃಷ್ಟಿಯನ್ನು ಹೊಂದಿ ಅಲ್ಪಬುದ್ಧಿಯುಳ್ಳವರಾಗಿ ಜಗತ್ತನ್ನು ನಾಶ ಮಾಡಲೆಂದೇ ತಿರುಗಿ ತಿರುಗಿ ಹುಟ್ಟುತ್ತಾರೆ.

ಉಗ್ರವಾದ ಕರ್ಮಗಳನ್ನು ಮಾಡುತ್ತಾರೆ. ಶಾಸ್ತ್ರವಿಧಿಯನ್ನು ಮೀರಿ ಡಂಭಾಚಾರದಿಂದ ನಾವೂ ಯಜ್ಞ ಮಾಡುತ್ತೇವೆ ಎಂದು ಯಜ್ಞ ಮಾಡುತ್ತಾರೆ. ಅಂತರ್ಯಾಮಿಯಾದ ಭಗವಂತನನ್ನು ಅಲ್ಲಗಳೆಯುತ್ತಾ, ತಮ್ಮಲ್ಲೂ ಬೇರೊಬ್ಬರಲ್ಲೂ ಇರುವ ನನ್ನನ್ನು ದ್ವೇಷ ಮಾಡುತ್ತಾರೆ. ನಾನೇ ಈಶ್ವರ, ನಾನೇ ಎಲ್ಲಾ ಭೋಗವುಳ್ಳವನು, ನಾನೇ ಸಿದ್ಧಪುರುಷ, ನಾನೇ ಸುಖಿ, ನಾನೇ ಸಂಪನ್ನ, ನಾನೇ ಕುಲೀನ, ನನ್ನ ಸಮ ಯಾರಿದ್ದಾರೆ ಎಂದು ಅಹಂಕಾರಪಡುತ್ತಾರೆ.ಇಂತಹ ಕ್ರೂರಿಗಳಾದ ಮನುಷ್ಯಾಧಮರನ್ನು ನಾನು ಮತ್ತೆ ಮತ್ತೆ ಆಸುರಯೋನಿಯಲ್ಲೇ ಹಾಕುತ್ತೇನೆ. ಹೀಗಾಗಿ ಅವರು ನನ್ನನ್ನು ಎಂದೂ ಹೊಂದಲು ಸಾಧ್ಯವಾಗುವುದಿಲ್ಲ. ಜನ್ಮ ಜನ್ಮದಲ್ಲೂ ಮಿಥ್ಯಾಜ್ಞಾನಿಗಳಾಗಿ ನನ್ನನ್ನು ಹೊಂದದೇ ಅಧಮಗತಿಯನ್ನು ಹೊಂದುತ್ತಾರೆ.

ಅಯೋಗ್ಯವಾದ ಬ್ರಹ್ಮೈಕ್ಯದಲ್ಲಿ ಕಾಮನೆ, ಭಗವದ್ಭಕ್ತರಲ್ಲಿ ದ್ವೇಷ, ತನ್ನ ಸ್ವಾತಂತ್ರ್ಯದಲ್ಲಿ ಲೋಭ,ಇವುಗಳು ನಿತ್ಯ ನರಕಕ್ಕೆ ಕಾರಣ. ಆದ್ದರಿಂದ ವಿವೇಕೀಪುರುಷನು ಇವುಗಳನ್ನು ಬಿಡಬೇಕು'.

ಆದ್ದರಿಂದ ಅರ್ಜುನ! ಏನನ್ನು ಮಾಡಬೇಕು? ಏನನ್ನು ಬಿಡಬೇಕು ಎಂಬುವುದಕ್ಕೆ ಶಾಸ್ತ್ರವೇ ಅಳತೆಗೋಲು. ಶಾಸ್ತ್ರದಲ್ಲಿ ಹೇಳಿದಂತೆ ಕ್ಷತ್ರಿಯರಿಗೆ ಉಚಿತವಾದ ಯುದ್ಧಕರ್ಮವನ್ನು ಮಾಡಲು ನೀನು ಅರ್ಹನಾಗಿದ್ದೀಯೆ.

## ಸಪ್ತದಶಾಧ್ಯಾಯಸಾರ

'ಹಿಂದಿನ ಅಧ್ಯಾಯದಲ್ಲಿ ಹೇಳಿದಂತೆ ಶಾಸ್ತ್ರವಿಧಿಯನ್ನು ತಿಳಿದು ಕರ್ಮವನ್ನು ಮಾಡಬೇಕಾಗಿದೆ. ಇದನ್ನು ಬಿಟ್ಟು ತಮ್ಮ ಇಚ್ಛೆಗೆ ತಕ್ಕಂತೆ ಕರ್ಮ ಮಾಡತಕ್ಕವರು ಸಾತ್ವಿಕರೋ ರಾಜಸರೋ ತಾಮಸರೋ' ಎಂದು ಅರ್ಜುನರು ಪ್ರಶ್ನೆ ಮಾಡುತ್ತಾರೆ. ಇದಕ್ಕೆ ಶ್ರೀಕೃಷ್ಣನು ಹೀಗೆ ಉತ್ತರಿಸುತ್ತಾನೆ.

'ಶ್ರದ್ಧೆಯು ಸಾತ್ವಿಕ, ರಾಜಸ, ತಾಮಸ ಎಂದು ಮೂರುವಿಧವಾಗಿದೆ. ಆ ಶ್ರದ್ಧೆ ಎಂಬುದು ಜೀವನ ಸ್ವರೂಪವೇ ಆಗಿದೆ. ಎಂದರೆ ಸಾತ್ವಿಕಶ್ರದ್ಧೆಯುಳ್ಳವನು ಸಾತ್ವಿಕ. ರಾಜಸಶ್ರದ್ಧೆಯುಳ್ಳವನು ರಾಜಸ. ತಾಮಸ ಶ್ರದ್ಧೆಯುಳ್ಳವನು ತಾಮಸ. ಹೀಗೆ ಶಾಸ್ತ್ರವಿಧಿಯನ್ನು ತಿಳಿಯದೇ ಕರ್ಮ ಮಾಡುವವರು ಅವರವರ ಶ್ರದ್ಧೆಗೆ ತಕ್ಕಂತೆ ಸಾತ್ವಿಕರೂ, ರಾಜಸರೂ, ತಾಮಸರೂ ಸಹ ಆಗಿರಬಹುದು. ಭಗವದರ್ಪಣಬುದ್ಧಿಯಿಂದ ಶಾಸ್ತ್ರವಿಹಿತವಾದ ಕರ್ಮವನ್ನು ಮಾಡುವವರು ಸಾತ್ವಿಕರು. ಫಲಾಪೇಕ್ಷೆಯಿಂದ ಕರ್ಮವನ್ನು ಮಾಡುವವರು ರಾಜಸರು. ಕರ್ತವ್ಯ, ಅಕರ್ತವ್ಯ ವಿವೇಕವಿಲ್ಲದೇ ತಮ್ಮ ಸಾಮರ್ಥ್ಯವನ್ನೂ ವಿವೇಕ ಮಾಡಿಕೊಳ್ಳದೇ ಆಲಸ್ಯಾದಿಗಳಿಂದ ಕರ್ಮ ಮಾಡತಕ್ಕವರು ತಾಮಸರು.

ಆಹಾರ,ಯಜ್ಞ, ದಾನ, ತಪಸ್ಸು,ಧೃತಿ,ಎಲ್ಲದರಲ್ಲೂ ಸಾತ್ವಿಕ, ರಾಜಸ, ತಾಮಸವಿಭಾಗಗಳಿವೆ.

ತಪಸ್ಸು ಕಾಯಿಕ, ವಾಚನಿಕ, ಮಾನಸಿಕ ಎಂದು ಮೂರುಬಗೆ. ಬ್ರಹ್ಮಚರ್ಯ, ಅಹಿಂಸೆ, ವ್ರತೋಪವಾಸಾದಿಗಳು ಕಾಯಿಕತಪಸ್ಸು ಎನಿಸುತ್ತದೆ. ಸತ್ಯ, ವೇದಾಧ್ಯಯನ, ನಿಷ್ಠುರಮಾತನ್ನು ಆಡದೇ ಇರುವುದು,ವ್ಯರ್ಥವಾದ ಭಾಷಣವನ್ನು ಬಿಡುವುದು ಇವೆಲ್ಲ ವಾಚನಿಕತಪಸ್ಸು ಎನಿಸುತ್ತದೆ. ಮತ್ತೊಬ್ಬರಿಗೆ ಕೇಡನ್ನು ಬಯಸದೇ ಇರುವುದು, ಶಾಸ್ತ್ರಾರ್ಥಮನನ ಇವೆಲ್ಲ ಮಾನಸಿಕ ತಪಸ್ಸು ಎನಿಸುತ್ತದೆ.ಹೀಗೆ ಪ್ರತಿಯೊಂದೂ ಸಾತ್ವಿಕ,ರಾಜಸ, ತಾಮಸವಿಭಾಗದಿಂದ ಕೂಡಿದೆ.

ಭಗವಂತನಿಗೆ 'ಓಂ', ತತ್, ಸತ್ ಎಂದು ಮೂರು ಹೆಸರಿದೆ. ಬ್ರಾಹ್ಮಣರು, ವೇದಗಳು, ಯಜ್ಞಗಳು ಇವೆಲ್ಲವನ್ನೂ ಪರಸ್ಪರ ಓತಪ್ರೋತವಾಗಿರುವಂತೆ ಹೊಕ್ಕಿಕೊಂಡಿರುವಂತೆ ಸೃಷ್ಟಿ ಮಾಡಿರುವುದರಿಂದ ಭಗವಂತನಿಗೆ 'ಓಂ' ಎನ್ನುತ್ತಾರೆ. ಪರೋಕ್ಷನಾದ್ದರಿಂದ 'ತತ್' ಎನ್ನುತ್ತಾರೆ. ಸಾಧುಗುಣಪೂರ್ಣನಾದ್ದರಿಂದ 'ಸತ್' ಎನ್ನುತ್ತಾರೆ. 'ಓಂ' ಎನ್ನುವುದಕ್ಕೆ ಪ್ರಶಸ್ತ'ಕರ್ಮ ಎಂದೂ ಅರ್ಥವಿದೆ. ಪರಮಾತ್ಮನು ಪ್ರೇರಕನಾಗಿ ಪ್ರವೇಶ ಮಾಡಿದ್ದಾನೆ ಎಂದು ನೆನೆಸಿಕೊಳ್ಳಲು 'ಓಂ' ಎಂದು ಉಚ್ಚಾರ ಮಾಡಿ, ಆ ಸ್ವರ್ಗಾದಿಫಲವು ಆಗಲಿ ಎಂದು ಅನುಸಂಧಾನವನ್ನು ಬಿಟ್ಟು ತನ್ನ ವರ್ಣ ಮತ್ತು ಆಶ್ರಮಕ್ಕೆ ಉಚಿತವಾದ ಪ್ರಶಸ್ತಕರ್ಮವು 'ಸತ್' ಎನಿಸುತ್ತದೆ. ಇದಕ್ಕೆ ವಿರುದ್ಧವಾದದ್ದು 'ಅಸತ್' ಎನಿಸುತ್ತದೆ. ಇಂತಹ ಅಸತ್ ಕರ್ಮದಿಂದ ಈ ಲೋಕದ ಸುಖವೂ ಪರಲೋಕದ ಸುಖವೂ ಇಲ್ಲ. ಆದ್ದರಿಂದ ಶ್ರೇಯಸ್ಕಾಮಿಗಳು ಹಿಂದೆ ಹೇಳಿದ ಸತ್ಕರ್ಮದಲ್ಲೇ ಆಸಕ್ತರಾಗಬೇಕು.

## ಅಷ್ಟಾದಶಾಧ್ಯಾಯ ಸಾರ

ಹದಿನೆಂಟನೆಯ ಅಧ್ಯಾಯವು ಹಿಂದಿನ ಎಲ್ಲಾ ಅಧ್ಯಾಯಗಳ ಸಂಗ್ರಹರೂಪವಾದದ್ದು.

ಮೊದಲಿಗೆ ಅರ್ಜುನರು ತ್ಯಾಗ ಮತ್ತು ಸಂನ್ಯಾಸಗಳ ವ್ಯತ್ಯಾಸವನ್ನು ಸ್ಪಷ್ಟವಾಗಿ ತಿಳಿಯಲು ಅಪೇಕ್ಷಿಸುತ್ತಾರೆ. ಆಗ ಶ್ರೀಕೃಷ್ಣನು ಹೀಗೆ ಉತ್ತರಿಸುತ್ತಾನೆ. ಕಾಮ್ಯಕರ್ಮಗಳನ್ನು ಬಿಡತಕ್ಕದ್ದು ಸಂನ್ಯಾಸ. ಎಲ್ಲಾ ಕರ್ಮಗಳ ಫಲತ್ಯಾಗವು ತ್ಯಾಗ ಎನಿಸುತ್ತದೆ. ಆ ತ್ಯಾಗದಲ್ಲಿ ಮೂರುವಿಧವಿದೆ. ತ್ಯಾಗಶಬ್ದದ ಅರ್ಥವನ್ನು ತಿಳಿಯದೇ ಕರ್ಮವನ್ನೇ ಬಿಟ್ಟುಬಿಡತಕ್ಕದ್ದು ತಾಮಸತ್ಯಾಗ ಎನಿಸುತ್ತದೆ. ದೇಹಾಯಾಸಕ್ಕೆ ಹೆದರಿ ಕರ್ಮವನ್ನು ಬಿಡತಕ್ಕದ್ದು ರಾಜಸತ್ಯಾಗ ಎನಿಸುತ್ತದೆ. ಸ್ವೋಚಿತ ಕರ್ಮವನ್ನು ಮಾಡಿ ಫಲಾಪೇಕ್ಷೆಯನ್ನು ಬಿಡತಕ್ಕದ್ದು ಸಾತ್ವಿಕತ್ಯಾಗ.

ಕೆಲವರು ಕರ್ಮವನ್ನು ಬಿಡಬೇಕು ಎನ್ನುತ್ತಾರೆ. ಕೆಲವರು ಕರ್ಮವನ್ನು ಬಿಡಬಾರದು ಎನ್ನುತ್ತಾರೆ. ಇವೆರಡರ ನಿಶ್ಚಯವನ್ನು ನಾನು ಹೇಳುತ್ತೇನೆ ಕೇಳು. ಯಜ್ಞ, ತಪಸ್ಸು ದಾನ ಎಂಬ ತ್ರಿವಿಧಕರ್ಮಗಳನ್ನು ಬಿಡಬಾರದು. ಏಕೆಂದರೆ ಅವು ಪಾವನ. ಮತ್ತೇನೆಂದರೆ ಯಜ್ಞ, ದಾನ, ತಪಸ್ಸುಗಳನ್ನು ಮಾಡಿ ಭಗವತ್ಪ್ರೀತಿಯನ್ನು ಬಿಟ್ಟು ಬೇರೆಯ ಫಲವನ್ನು ಬಯಸದಿರುವುದೇ ನನಗೆ ಸಮ್ಮತವಾದ ತ್ಯಾಗದ ಮಾರ್ಗ.

ಬುದ್ಧಿವಂತನು ತನಗೆ ಪ್ರಯೋಜನವಾದೀತೆಂಬ ಭಾವದಿಂದ ಲೌಕಿಕಕರ್ಮಗಳಲ್ಲಿ ಆಸಕ್ತನಾಗುವುದಿಲ್ಲ. ಅಥವಾ ತನಗೆ ಪ್ರತಿಕೂಲವೆಂಬ ಭಾವದಿಂದ ಲೌಕಿಕಕರ್ಮಗಳನ್ನು ದ್ವೇಷಿಸುವುದೂ ಇಲ್ಲ. ನಾನು ಹೇಳಿದ ತ್ಯಾಗಮಾರ್ಗವನ್ನು ಅನುಸರಿಸಿ ಸತ್ವಗುಣವನ್ನು ಬೆಳೆಸಿಕೊಂಡು ಜ್ಞಾನಿಯಾಗಿ ಎಲ್ಲಾ ಸಂಶಯಗಳನ್ನು ಪರಿಹಾರ ಮಾಡಿಕೊಳ್ಳುತ್ತಾನೆ.

ಎಲ್ಲಾ ವರ್ಣದವರೂ ಆಶ್ರಮದವರೂ ಸಹ ತಮಗೆ ತಕ್ಕತಕ್ಕ ಯಜ್ಞ, ತಪಸ್ಸು, ದಾನಗಳನ್ನು ಆಚರಿಸಲೇ ಬೇಕು. ತಪಸ್ಸಿನಲ್ಲಿ ಮೂರುವಿಧ. ಕಾಯಿಕ, ವಾಚಿಕ, ಮಾನಸಿಕ ಎಂಬುದಾಗಿ. ಬ್ರಹ್ಮಚರ್ಯ, ಅಹಿಂಸಾ, ಸ್ವವರ್ಣಾಶ್ರಮೋಚಿತಕರ್ಮಾನುಷ್ಠಾನ ಇವುಗಳು ಕಾಯಿಕತಪಸ್ಸು ಎನಿಸುತ್ತವೆ. ಸತ್ಯ, ಮತ್ತೊಬ್ಬರಿಗೆ ಉದ್ವೇಗಬರದಂತೆ ಮಾತನಾಡತಕ್ಕದ್ದು, ವೇದಾಧ್ಯಯನ ಇವುಗಳು ವಾಚನಿಕ ತಪಸ್ಸು ಎನಿಸುತ್ತವೆ. ರಾಗ -ದ್ವೇಷಗಳನ್ನು ಬಿಡತಕ್ಕದ್ದು, ಶಾಸ್ತ್ರಾರ್ಥಚಿಂತನ ಇವುಗಳು ಮಾನಸಿಕ ತಪಸ್ಸು ಎನಿಸುತ್ತವೆ. ಇಂತಹ ತ್ರಿವಿಧತಪಸ್ಸನ್ನು ಸಂಗ ಮತ್ತು ಫಲಗಳನ್ನು ಬಿಟ್ಟು ಮಾಡಬೇಕು.

ಒಳ್ಳೆಯ ಕೆಲಸ ಮಾಡಿದಾಗ ಇಷ್ಟವಾದ ಫಲ, ಕೆಟ್ಟಕೆಲಸ ಮಾಡಿದಾಗ ಅನಿಷ್ಟವಾದ ಫಲ, ಮಿಶ್ರವಾದ ಕೆಲಸವನ್ನು ಮಾಡಿದಾಗ ಮಿಶ್ರವಾದ ಫಲ ಇವು ಹಿಂದೆಹೇಳಿದ ಫಲತ್ಯಾಗವನ್ನು ಮಾಡದವರಿಗೆ ಉಂಟಾಗುತ್ತವೆಯೇ ಹೊರತಾಗಿ ತ್ಯಾಗಿಗಳಿಗೆ ಉಂಟಾಗುವುದಿಲ್ಲ.

ಯಾವುದೇ ಕರ್ಮವನ್ನು ಮಾಡಬೇಕಾದರೂ ಅದಕ್ಕೆ ಐದುಕಾರಣಗಳು. ಶರೀರ ಮೊದಲಾದ ಅಧಿಷ್ಠಾನ, ಸ್ವತಂತ್ರಕರ್ತನಾದ ಪರಮಾತ್ಮ ಮತ್ತು ಅಸ್ವತಂತ್ರಕರ್ತನಾದ ಜೀವ, ಸ್ರುಕ್, ಸ್ರುವ ಮೊದಲಾದ ಯಜ್ಞಕ್ಕೆ ಬೇಕಾದ ಉಪಕರಣಗಳು ಮತ್ತು ಇಂದ್ರಿಯಗಳು, ನಾನಾವಿಧವಾದ ಚೇಷ್ಟೆ ವ್ಯಾಪಾರಗಳು ಮತ್ತು ಅದೃಷ್ಟ ಇವುಗಳನ್ನೇ ಸಂಗ್ರಹವಾಗಿ ಹೇಳುವಾಗ ಕರಣ, ಕರ್ಮ, ಮತ್ತು ಕರ್ತಾ ಎನ್ನುತ್ತಾರೆ. ಹೀಗಿರುವಾಗ ಸ್ವತಂತ್ರಕರ್ತನಾದ ಭಗವಂತನ್ನು ಮರೆತು ಜೀವನನ್ನೇ ಕರ್ತನೆಂದು ತಿಳಿಯುವುದು ತಪ್ಪುತಿಳುವಳಿಕೆಮಿಥ್ಯಾಜ್ಞಾನ.

ಯಾರಿಗೆ ಅಹಂಕಾರವಿಲ್ಲವೋ ಯಾರಬುದ್ಧಿಗೆ ಇಂತಹ ಫಲ ಬೇಕು ಎಂಬ ಆಕಾಂಕ್ಷೆ ಇಲ್ಲವೋ ಅಂತಹ ಯಮ, ರುದ್ರ ಮೊದಲಾದ ಜಗತ್ತಿನ ಸಂಹಾರಕ್ಕೇ ಹುಟ್ಟಿರುವ ವ್ಯಕ್ತಿಗಳು ತಮ್ಮ ಕರ್ತವ್ಯದೃಷ್ಟಿಯಿಂದ ಇಡೀಜಗತ್ತನ್ನೇ ಸಂಹರಿಸಿದರೂ ಪಾಪವನ್ನು ಹೊಂದುವುದಿಲ್ಲ.

ಭಗವಂತನೇ ಎಲ್ಲಾ ಕರ್ಮಗಳನ್ನು ಪ್ರೇರಿಸುತ್ತಿದ್ದರೂ ಕೂಡ ಜೀವನ ಅನಾದಿಯೋಗ್ಯತೆ, ಪೂರ್ವಕರ್ಮ, ಇಂದಿನಪ್ರಯತ್ನ ಇವುಗಳನ್ನು ಅನುಸರಿಸಿ ಮುಂದಿನಕರ್ಮಗಳನ್ನು ಪ್ರೇರಿಸುತ್ತಾನೆ. ಆದ್ದರಿಂದ ಭಗವಂತನಿಗೆ ವೈಷಮ್ಯ, ನಿರ್ದಯತೆ ಮೊದಲಾದ ದೋಷಗಳಿಲ್ಲ.

ಎಲೈ! ಅರ್ಜುನನೇ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕುವರ್ಣದವರ, ಕರ್ಮಗಳು ಅವರ ಸ್ವಾಭಾವಿಕಗುಣಗಳಿಗೆ ತಕ್ಕಂತೆ ಭಿನ್ನಭಿನ್ನವಾಗಿದೆ.

ಮುಕ್ತಿಯೋಗ್ಯರಾದ ಮನುಷ್ಯೋತ್ತಮರಲ್ಲಿ ಈ ಮುಂದೆಹೇಳುವ ವಿಭಾಗವಿದೆ. ಸಾತ್ವಿಕನು ಬ್ರಾಹ್ಮಣ. ಸ್ವಲ್ಪರಜೋಗುಣದಿಂದ ಕೂಡಿದ ಸಾತ್ವಿಕನು ಕ್ಷತ್ರಿಯ. ಸಮವಾದ ರಜೋಗುಣ,ತಮೋಗುಣಮಿಶ್ರವಾದ ಸತ್ವಗುಣದಿಂದ ಕೂಡಿದವನು ವೈಶ್ಯ. ರಜೋಗುಣಕ್ಕಿಂತ ಹೆಚ್ಚು ತಮೋಗುಣಕೂಡಿದ ಸಾತ್ವಿಕನು ಶೂದ್ರ. ಈ ಗುಣಗಳಿಗೆ ತಕ್ಕಂತೆ ಅವರ ಸ್ವಾಭಾವಿಕಕರ್ಮವೂ ಭಿನ್ನವಾಗಿದೆ.

ಶಮ(ಭಗವನ್ನಿಷ್ಠವಾದಬುದ್ಧಿ), ದಮ=ಇಂದ್ರಿಯನಿಗ್ರಹ, ತಪಸ್ಸು, ಶೌಚ, ಕ್ಷಾಂತಿ(ಕೋಪಬಿಡುವುದು), ಆರ್ಜವ, ಜ್ಞಾನ, ವಿಜ್ಞಾನ (ವಿಶೇಷಜ್ಞಾನ), ಆಸ್ತಿಕತನ ಇವು ಬ್ರಾಹ್ಮಣನ ಧರ್ಮಗಳು. ಶೌರ್ಯ, ವೀರ್ಯ, ತೇಜಸ್ಸು ಧೈರ್ಯ, ಯುದ್ಧದಲ್ಲಿ ಓಡಿಹೋಗದೇ ಇರುವುದು, ಭೂದಾನಾದಿಗಳು, ಐಶ್ವರ್ಯ (ಶರೀರದಂಡ ವಿಧಿಸುವುದು, ಜುಲ್ಮಾನೆ

ಹಾಕುವುದು) ಇವು ಕ್ಷತ್ರಿಯಧರ್ಮ. ಕೃಷಿ, ಗೋರಕ್ಷಣೆ, ವಾಣಿಜ್ಯ, ಬಡ್ಡೀಜೀವನ ಇವು ವೈಶ್ಯಧರ್ಮ. ತನಗೆ ಆಶ್ರಯ ಕೊಟ್ಟ ದ್ವಿಜರ ಶುಶ್ರೂಷೆಯು ಶೂದ್ರನ ಧರ್ಮ.

ಶಮ, ದಮಾದಿ ಬ್ರಾಹ್ಮಣಧರ್ಮಗಳು ಸ್ವಲ್ಪ ಕೆಳಮಟ್ಟದಲ್ಲಿ ಕ್ಷತ್ರಿಯನಲ್ಲೂ ಉಂಟು. ಅದಕ್ಕಿಂತ ಕೆಳಮಟ್ಟದಲ್ಲಿ ವೈಶ್ಯನಲ್ಲೂ ಉಂಟು.

ಹೀಗೆ ಬ್ರಾಹ್ಮಣಾದಿಗಳು ತಮ್ಮ ತಮ್ಮ ಕರ್ಮದಲ್ಲಿ ಆಸಕ್ತರಾಗಿದ್ದಾಗ ಅಂತಃಕರಣಶುದ್ಧಿದ್ವಾರಾ ಜ್ಞಾನವನ್ನು ಪಡೆಯುತ್ತಾರೆ. ಯಾವ ಭಗವಂತನು ತಮ್ಮನ್ನು ಪ್ರೇರಣೆ ಮಾಡುತ್ತಿದ್ದಾನೋ ಅಂತಹ ಭಗವಂತನನ್ನು ತಮ್ಮತಮ್ಮ ಕರ್ಮದಿಂದ ಆರಾಧಿಸುವುದೇ ಮಹಾಪೂಜೆ. ಇದರಿಂದ ಭಗವಂತನು ಪ್ರೀತನಾಗಿ ಜ್ಞಾನಸಿದ್ಧಿಯನ್ನೂ ಮೋಕ್ಷಸಿದ್ಧಿಯನ್ನೂ ಕೊಡುತ್ತಾನೆ.

ಸ್ವಧರ್ಮವು ಅಂಗಹೀನವಾಗಿದ್ದರೂ ಸಹ ಸಾಂಗವಾದ ಪರಧರ್ಮಕ್ಕಿಂತ ಅದೇ ಶ್ರೇಷ್ಠ. ಸ್ವಧರ್ಮವನ್ನು ಕೈಲಾದಷ್ಟು ಮಾಡಿದರೂ ಸರಿ ಮತ್ತೊಬ್ಬರ ಧರ್ಮವನ್ನು ಚೆನ್ನಾಗಿ ಮಾಡಲು ಪ್ರಯತ್ನಮಾಡಬಾರದು. ಸ್ವಧರ್ಮವನ್ನು ಮಾಡಿಕೊಂಡು ನಿರ್ಧನಿಕನಾಗಿದ್ದರೂ ಶ್ರೇಯಸ್ಸು. ಆದರೆ ಪರಧರ್ಮವು ನರಕಾದಿಭಯವನ್ನು ಉಂಟುಮಾಡುತ್ತದೆ.

(ಲೋಕದಲ್ಲೂ ಸಹ ಒಂದು ಶಾಲೆಯಲ್ಲಿ ಮುಖ್ಯೋಪಾಧ್ಯಾಯ, ಸಹೋಪಾಧ್ಯಾಯ ಮತ್ತು ಜವಾನರು ಇರುತ್ತಾರೆ. ಸಹೋಪಾಧ್ಯಾಯನು ಮುಖ್ಯೋಪಾಧ್ಯಾಯನ ಕಾರ್ಯವನ್ನೂ ಮಾಡಲು ಹೋಗಬಾರದು. ಜವಾನನ ಕೆಲಸವನ್ನೂ ಮಾಡಲು ಹೋಗಬಾರದು. ತನ್ನ ಕೆಲಸವನ್ನು ತಾನು ಮಾಡಬೇಕು. ಅದರಂತೆ ಪ್ರತಿಯೊಬ್ಬರೂ ತಮ್ಮ ವರ್ಣಕ್ಕೆ ತಕ್ಕ ಕರ್ಮವನ್ನು ಮಾಡಬೇಕೇ ಹೊರತಾಗಿ ಉತ್ತಮವರ್ಣಕ್ಕೆ ಹೇಳಿದ ಅಥವಾ ಕೆಳಗಿನ ವರ್ಣಕ್ಕೆ ಹೇಳಿದ ಕರ್ಮವನ್ನು ಮಾಡಬಾರದು)

ಬೆಂಕಿ ಇದ್ದಮೇಲೆ ಪ್ರಾಯಃ ಹೊಗೆ ಇದ್ದೇ ಇರುತ್ತದೆ. ಅದರಂತೆ ಯಾವುದೇ ಕರ್ಮವನ್ನು ಆರಂಭಿಸಿದರೂ ದೋಷವಿರುವುದು ಸಂಭಾವಿತ. ಹಾಗೆಂದ ಮಾತ್ರಕ್ಕೆ ಕರ್ಮವನ್ನೇ ಬಿಡಬಾರದು.

ಹೀಗೆ ನಿಷ್ಕಾಮಕರ್ಮವನ್ನು ಅನುಷ್ಠಾನ ಮಾಡತಕ್ಕ ಸಾಧಕನು ಮುಂದೆ ಹೇಳುವ ಧರ್ಮವನ್ನೂ ಆಚರಿಸಬೇಕು. ನಿರ್ಮಲಬುದ್ಧಿಯುಳ್ಳವನಾಗಿ ಮನಸ್ಸನ್ನು ನಿಗ್ರಹಿಸಬೇಕು. ಏಕಾಂತದಲ್ಲಿ ವಾಸ ಮಾಡಬೇಕು. ಲಘುವಾದ ಆಹಾರವನ್ನು ಸೇವಿಸಬೇಕು. ಮಾತು, ಮನಸ್ಸು ಮತ್ತು ದೇಹಗಳ ನಿಯಂತ್ರಣ ಬೇಕು. ರಾಗ-ದ್ವೇಷಗಳನ್ನು ಬಿಡಬೇಕು. ವಿಷಯ ಚಿಂತನೆ ಮಾಡದೇ ಭಗವದ್ಧ್ಯಾನದಲ್ಲಿ ಆಸಕ್ತನಾಗಿರಬೇಕು. ವಿರಕ್ತನಾದರೆ ಮಾತ್ರ ಇದು ಸಾಧ್ಯವಾಗುತ್ತದೆ. ಅಹಂಕಾರ, ಬಲ,ದರ್ಪ, ಕಾಮ,ಕ್ರೋಧ, ಅಭಿಮಾನಗಳನ್ನು ಬಿಡಬೇಕು. ಇಂತಹ ಸಾಧಕನು ಬ್ರಹ್ಮನಿಷ್ಠನಾಗುತ್ತಾನೆ. ಇದರಿಂದ ಆತನ ಶೋಕ,ವಿಷಯೇಚ್ಛೆ ಎಲ್ಲವೂ ನಿವೃತ್ತವಾಗುತ್ತದೆ.

ಆರನೆಯ ಅಧ್ಯಾಯದಲ್ಲಿ ಹೇಳಿದಂತೆ ಸಾಮ್ಯದೃಷ್ಟಿಯನ್ನು ಬೆಳೆಸಿಕೊಂಡು ನನ್ನ ಭಕ್ತಿಯನ್ನು ಪಡೆಯುತ್ತಾನೆ. ಆ ಭಕ್ತಿಪೂರ್ವಕ ಶ್ರವಣ, ಮನನಾದಿಗಳಿಂದ ನನ್ನ ಜ್ಞಾನೋದಯವಾಗುತ್ತದೆ. ಅನಂತರ ಅಪರೋಕ್ಷಜ್ಞಾನದಿಂದ ನನ್ನನ್ನು ಪ್ರವೇಶ ಮಾಡುತ್ತಾನೆ.

ಇದನ್ನೇ ಸಂಗ್ರಹಿಸಿ ಹೇಳುವುದಾದರೆ ಭಗವತ್ಪ್ರೀತಿಕರವಾದ ಸ್ವಧರ್ಮವನ್ನು ಆಚರಿಸತಕ್ಕವನು ಭಗವಂತನ ಅನುಗ್ರಹದಿಂದ ಧ್ಯಾನದ್ವಾರಾ ಮುಕ್ತನಾಗುತ್ತಾನೆ.

ಆದ್ದರಿಂದ ಹೇ! ಅರ್ಜುನ, ನಾನೇ ಸರ್ವೋತ್ತಮ ಎಂಬ ಬುದ್ಧಿಯಿಂದ ನನ್ನಲ್ಲಿ ಕರ್ಮಸಂನ್ಯಾಸವನ್ನು ಮಾಡು. ನನ್ನನ್ನೇ ಸರ್ವದಾ ಚಿಂತಿಸುತ್ತಿರು. ಆಗ ನನ್ನ ಅನುಗ್ರಹದಿಂದ ದಾಟಲಸಾಧ್ಯವಾದ ಸಂಸಾರವನ್ನು ದಾಟುತ್ತೀಯೆ. ಇದಕ್ಕೆ

ವಿರುದ್ಧವಾಗಿ ಭಗವಂತನ ಸ್ವಾತಂತ್ರ್ಯವನ್ನು ಮರೆತು ನಾನೇ ಮಾಡುತ್ತೇನೆಂಬ ಅಹಂಕಾರಕ್ಕೆ ಒಳಗಾದರೆ ಅನ್ಯಾಯವಾಗಿ ಹಾಳಾಗುತ್ತೀಯೆ.

ನೀನು ಅಹಂಕಾರದಿಂದಾಗಿ ನಾನು ಯುದ್ಧ ಮಾಡುವುದಿಲ್ಲ ಎಂದುಕೊಳ್ಳುತ್ತಿದ್ದೀಯೆ. ಆದರೆ ನಿನ್ನ ಸ್ವಭಾವಕ್ಕೆ ಅನುಸರಿಸಿ ಭಗವಂತನ ಪ್ರೇರಣೆಯಿಂದ ಯುದ್ಧವನ್ನು ಮಾಡಿಯೇ ಮಾಡುತ್ತೀಯೆ. ಎಲ್ಲರ ಹೃದಯದಲ್ಲೂ ಭಗವಂತನು ಪ್ರೇರಕನಾಗಿದ್ದಾನೆ. ದೇಹದಲ್ಲಿರುವ ಜೀವರನ್ನು ತನ್ನ ಇಚ್ಛೆಯಿಂದ ಅವರ ಕರ್ಮಕ್ಕೆ ಅನುಸಾರವಾಗಿ ತಿರುಗಿಸುತ್ತಾನೆ. ಅಂತಹ ಭಗವಂತನನ್ನೇ ಸರ್ವಪ್ರಕಾರದಿಂದ ಶರಣಾಗತನಾಗು. ಶರಣಾಗತಿ ಎಂದರೆ ಕೇವಲ 'ಶರಣಂ ಪ್ರಪದ್ಯೇ' ಎಂದು ಹೇಳುವುದಲ್ಲ, ಮತ್ತೇನೆಂದರೆ ಭಗವದ್ಭಕ್ತಿಪೂರ್ವಕವಾಗಿ ಅಖಂಡವಾಗಿ ಮನಸ್ಸು ದೇಹ ಮತ್ತು ಮಾತಿನಿಂದ ಪೂಜಿಸುತ್ತಿರಬೇಕು.ನಾನು ಭಗವಂತನ ದಾಸ ಎಂದು ತಿಳಿದಿರಬೇಕು. ಭಗವಂತನು ರಕ್ಷಣೆ ಮಾಡಿಯೇ ಮಾಡುತ್ತಾನೆಂಬ ನಂಬಿಕೆ ಇರಬೇಕು. ಇಂತಹ ಶರಣಾಗತಿಯಿಂದ ಭಗವಂತನ ಅನುಗ್ರಹವನ್ನು ಪಡೆದು ಶಾಶ್ವತವಾದ ಸ್ಥಾನವನ್ನು ಪಡೆಯುತ್ತೀಯೆ.

ನಿನಗಾಗಿ ಅತೀರಹಸ್ಯವಾದ ಜ್ಞಾನವನನು ಉಪದೇಶಿಸಿದ್ದೇನೆ. ಎಲ್ಲವನ್ನೂ ವಿಮರ್ಶೆಮಾಡಿಕೊಂಡು ನಿನಗೆ ಇಷ್ಟಬಂದಂತೆ ಮಾಡು.

(ಶ್ರೀಕೃಷ್ಣನು ಅರ್ಜುನನಿಗೆ ಮನಸ್ಸಿಗೆ ಬಂದಂತೆ ಮಾಡಲು ಅನುಮತಿ ಕೊಟ್ಟದ್ದಲ್ಲ. ಮತ್ತೇನೆಂದರೆ ನಾನು ಹೇಳಿದ್ದಂತೂ ಆಯಿತು. ನಿನ್ನ ಇಚ್ಛೆಗೆ ಬಂದಂತೆ ಮಾಡು ಎಂದು ಆಕ್ಷೇಪ ಮಾಡಿದ್ದಾನೆ)

ಹೇ! ಅರ್ಜುನ, ಹಿಂದೆ ಹೇಳಿದ್ದ ಸಾಧನಸಾರವನ್ನೇ ಮತ್ತೆ ಹೇಳುತ್ತೇನೆ ಕೇಳು. ನನ್ನಲ್ಲೇ ಮನಸ್ಸಿಡು. ನನ್ನ ಭಕ್ತನಾಗು. ನನ್ನನ್ನೇ ಪೂಜಿಸು. ನನ್ನನ್ನೇ ನಮಸ್ಕರಿಸು. ಇದರಿಂದ ಖಂಡಿತವಾಗಿ ನನ್ನನ್ನೇ ಹೊಂದುತ್ತೀಯೆ. ವೈಷ್ಣವೇತರಧರ್ಮಗಳನ್ನು ಬಿಟ್ಟು ನನ್ನನ್ನೇ ಶರಣಾಗತನಾಗು. ನಾನೇ ನಿನ್ನನ್ನು ಎಲ್ಲಾ ಪಾಪಗಳಿಂದ ಮುಕ್ತನನ್ನಾಗಿ ಮಾಡುತ್ತೇನೆ. ಆದರೆ ಪಾಪ ಬರುತ್ತದೆ ಎಂದು ಶೋಕಪಡಬೇಡ.

ಈ ರಹಸ್ಯವಾದ ಗೀತೆಯನ್ನು ತಪೋಹೀನರಿಗೆ ಹೇಳಬೇಡ. ತಪಸ್ಸು ಕಡಿಮೆ ಇದ್ದರೂ ಗುರುಶುಶ್ರೂಷೆ ಮಾಡುವವರಿಗೆ ಹೇಳಬಹುದು. ಗುರುಶುಶ್ರೂಷೆ ಮಾಡದವರಿಗೆ ಹೇಳಬಾರದು. ಗುರುಶುಶ್ರೂಷೆ ಕಡಿಮೆ ಇದ್ದರೂ ಹರಿ,ಗುರು ಭಕ್ತನಿಗೆ ಹೇಳಬಹುದು. ಭಕ್ತನಲ್ಲದವನಿಗೆ ಹೇಳಲೇಬಾರದು. ಭಕ್ತಿ ಕಡಿಮೆ ಇದ್ದರೂ ಹೇಳಬಹುದು. ಆದರೆ ನನ್ನನ್ನು ಯಾರು ಅಸೂಯೆ ಮಾಡುತ್ತಾನೋ ಅಂತಹವನಿಗೆ ಖಂಡಿತಾ ಹೇಳಬಾರದು.

ಈ ನನ್ನ ಮತ್ತು ನಿನ್ನ ಸಂವಾದರೂಪವಾದ ಭಗವದ್ಗೀತೆಯನ್ನು ನನ್ನ ಭಕ್ತರಿಗೆ ಯಾರು ಉಪದೇಶಿಸುತ್ತಾರೋ ಅವರು ನನ್ನಲ್ಲಿ ಮಹಾಭಕ್ತಿಯನ್ನು ಪಡೆದು ನನ್ನನ್ನೇ ಹೊಂದುತ್ತಾರೆ. ಸಂಶಯವಿಲ್ಲ. ಅಂತಹ ಗೀತೋಪದೇಶಕರಿಗಿಂತ ಹೆಚ್ಚು ಪ್ರೀತಿಪಾತ್ರರು ಮನುಷ್ಯರ ಮಧ್ಯದಲ್ಲಿ ನನಗೆ ಯಾರೂ ಇಲ್ಲ. ಋಷಿಗಳೂ, ದೇವತೆಗಳೂ ಇನ್ನೂ ಹೆಚ್ಚುಪ್ರೀತಿಪಾತ್ರರೆಂದರ್ಥ.

ವ್ಯಾಖ್ಯಾನ ಮಾಡುವ ಶಕ್ತಿ ಇಲ್ಲದಿದ್ದರೂ ಭಗವದ್ಗೀತೆಯನ್ನು ಗುರುಮುಖದಿಂದ ಯಾರು ಅಧ್ಯಯನ ಮಾಡುತ್ತಾನೋ ಅವರೂ ಸಹ ಜ್ಞಾನಯಜ್ಞದಿಂದ ನನ್ನನ್ನು ಸಂತೋಷಪಡಿಸುತ್ತಾನೆ. ಶ್ರದ್ಧಾ ಭಕ್ತಿಗಳಿಂದ ಯಾರು ಗೀತೆಯನ್ನು ಶ್ರವಣ ಮಾಡುತ್ತಾರೋ ಅವರೂ ಸಹ ಉತ್ತಮಲೋಕವನ್ನು ಪಡೆಯುತ್ತಾರೆ.

ಅರ್ಜುನ! ನಾನು ಮಾಡಿರುವ ಉಪದೇಶವನ್ನು ಗಮನವಿಟ್ಟು ಕೇಳಿದೆಯಾ? ನನ್ನ ಉಪದೇಶವು ಅರಣ್ಯರೋದನದಂತೆ ವ್ಯರ್ಥವಾಗಿಲ್ಲವಷ್ಟೆ! ನಿನ್ನ ಮನಸ್ಸಿನ ಸಂಶಯವೆಲ್ಲ ಪರಿಹಾರವಾಯಿತೆ?

ಹೀಗೆ ಶ್ರೀಕೃಷ್ಣನ ಮಾತನ್ನು ಕೇಳಿದ ಅರ್ಜುನರು ಉತ್ತರಿಸಿದರು.

ಚತುರ್ವಿಧನಾಶರಹಿತನಾದ ಪರಮಪುರುಷನೇ, ನನ್ನ ಮೋಹವೆಲ್ಲ ಪರಿಹಾರವಾಯಿತು. ನಿನ್ನ ಅನುಗ್ರಹದಿಂದ ಸರಿಯಾದ ತಿಳುವಳಿಕೆ ಹುಟ್ಟಿತು. ನನ್ನ ಸಂದೇಹಗಳೆಲ್ಲ ಪರಿಹಾರವಾಗಿವೆ. ನಿನ್ನ ಮಾತಿನಂತೆ ನಡೆಯುತ್ತೇನೆ. ಯುದ್ಧಕ್ಕೆ ಸನ್ನದ್ಧನಾಗಿ ನಿಂತಿದ್ದೇನೆ.

ಶ್ರೀಕೃಷ್ಣ-ಅರ್ಜುನಸಂವಾದರೂಪವಾದ ಗೀತೆಯನ್ನು ಸಂಜಯನು ಧೃತರಾಷ್ಟ್ರನನ್ನು ಕುರಿತು ಅನುವಾದ ಮಾಡಿ ಕಡೆಗೆ ಹೀಗೆ ಹೇಳುತ್ತಾನೆ.

ಮಹಾರಾಜ! ಅದ್ಭುತವೂ ರೋಮಾಂಚಕಾರಿಯೂ ಆದ ಶ್ರೀಕೃಷ್ಣಾರ್ಜುನರ ಸಂವಾದವನ್ನು ನಾನು ಈರೀತಿ ಹೇಳಿದ್ದೇನೆ. ಯಾರದೋ ಮುಖಾಂತರವಾಗಿ ಕೇಳಿದ್ದಲ್ಲ; ಸಾಕ್ಷಾತ್ ಕೃಷ್ಣನು ಹೇಳುತ್ತಿರುವಾಗಲೇ ಕೇಳಿದ್ದೇನೆ. ಆ ಭಗವಂತನ ವಿಶ್ವರೂಪವನ್ನು ಸ್ಮರಿಸಿ ಸ್ಮರಿಸಿ ನನಗೆ ರೋಮಾಂಚವಾಗುತ್ತದೆ. ಅತ್ಯಂತ ಆಶ್ಚರ್ಯವೂ ಆಗುತ್ತಿದೆ.

ಎಲ್ಲಿ ಯೋಗೀಶ್ವರನಾದ ಕೃಷ್ಣನು ಇದ್ದಾನೋ, ಗಾಂಡೀವಪಾಣಿಯಾದ ಅರ್ಜುನನು ಇದ್ದಾನೋ ಅಲ್ಲಿಯೇ ವಿಜಯ, ಐಶ್ವರ್ಯ, ಮಂಗಳ, ನೀತಿ ಎಲ್ಲವೂ ಉಂಟಾಗುತ್ತದೆ. ಇದು ನಿಶ್ಚಯವಾದ ಅಭಿಪ್ರಾಯ. ಆದ್ದರಿಂದ ನನ್ನ ಮಕ್ಕಳು ಗೆಲ್ಲುವರೋ ಎಂದು ನೀನು ಆಶಿಸ ಬೇಡ. ಪಾಂಡವರಿಗೆ ಜಯವಾಗುವುದು ನಿಶ್ಚಯ.

ಎಂಬಲ್ಲಿಗೆ ಶ್ರೀಮದ್ಭಗವದ್ಗೀತೆಯ ಹದಿನೆಂಟು ಅಧ್ಯಾಯಗಳ ಸಮಗ್ರಸಾರಾಂಶವು ಸಮಾಪ್ತವಾಯಿತು.

॥ಶ್ರೀಕೃಷ್ಣಾರ್ಪಣಮಸ್ತು॥

## सम्पादकीया प्राग्व्याहृतिः

**'गीता सुगीता कर्तव्या किमन्यैः शास्त्रविस्तरैः'** इति कृष्णार्जुनसंवादरूपायाः भगवता बादरायणेन महाभारते उपनिबद्धायाः सर्वशास्त्रोत्तमायाः श्रीमद्भगवद्गीतायाः माहात्म्यं विदितचरमेव सर्वेषां वेदान्तविदुषाम् । सेयं श्रीमद्भगवद्गीता श्रीमन्मध्वाचार्यविरचितभाष्येण श्रीजयतीर्थकृतगीता-भाष्यटीकया प्रमेयदीपिकया एवं तट्टिप्पण्या श्रीराघवेन्द्रतीर्थविरचितप्रमेयदीपिकाभावदीपेन च विलसिता अर्थावच्छेदानुरोधेन विभज्य, वाक्यच्छेदपदविश्लेषणपरसवर्णकरणकाकुलिङ्गादि-योजनैः एवं तत्र तत्र भाष्य-टीका-टिप्पणीषूद्धृतप्रमाणवचसामाकरस्थानव्याख्यादिनिर्देशादिभिश्च सम्भूषिता विद्वत्करकमलयोरिदम्प्रथमतया श्रीपूर्णप्रज्ञसंशोधनमन्दिरद्वारा प्रकाशिता महाप्रमोदेन समर्प्यते ।।

**गीताप्रस्थानम् -**

तत्र तावद्गीतायाः सुगीतत्वे इदमावश्यकं भवति यत् गीतायाः प्रामाण्यम्, शुद्धपाठान्वेषणम्, गीतातात्पर्यमित्यादिकम् । द्वैतसिद्धान्तप्रतिष्ठापनाचार्यैः श्रीमन्मध्वाचार्यैः गीतामधिकृत्य विरचितं ग्रन्थद्वयं **गीताभाष्यं गीतातात्पर्यं** च । तत्र प्रथमतो विरचितं गीताभाष्यं बदरीक्षेत्रे नारायणाय समर्पितम् । तत्र नारायणेन मङ्गलाचरणे 'शक्तितः' इति पदस्थाने 'लेशतः' इति पदनिवेशनेनास्मिन् भाष्ये स्वसम्मतिः सूचितेत्येनायं ग्रन्थः गीताकर्त्राशयोपोद्बलित इति निश्चप्रचमवगम्यते ।।

गीताभाष्यावतारिकायां वक्तृश्रोतृप्रसक्त्यानुकूल्यप्रदर्शनपूर्वकं महाभारतप्रामाण्य-गाम्भीर्यादिसमर्थनपुरस्सरं महाभारतैकदेशभूतगीताप्रामाण्यमहत्वादिकमसूचि । एवं 'ब्रह्मभूतः' इत्यादि गीतापदानामद्वैते तात्पर्यनिरासपूर्वकमन्तरङ्गबहिरङ्गविरोधप्रदर्शनपूर्वकं साधकबाधक-प्रमाणोदाहरणपूर्वकं द्वैतसिद्धान्तः श्रीमदाचार्यैः प्रत्यपादि । 'मम साधर्म्यमागताः' इत्यादिषु साम्यवादनिराकरणेन पुरुषोत्तमयोगोक्तरीत्या तारतम्यविष्णुसर्वोत्तमत्वादिप्रतिपादनपुरस्सरं विशिष्टाद्वैतसिद्धन्तोपि निरखण्डि । एवं मोक्षसाधनीभूतज्ञानसाधनं कर्म इत्युपपादनपूर्वकं ज्ञानकर्मणोः मोक्षकारणत्वप्रतिपादकसमुच्चयपक्षवादिभास्करसिद्धान्तः, तथा साक्षात् कर्मणो मोक्ष-साधनत्वप्रतिपादकमीमांसकसिद्धान्तश्च ।। ज्ञानादेव मोक्षः, ज्ञानोत्तरानुष्ठितकर्माणि मौक्तिका-नन्दवृद्धिकारणानीत्यस्मत्सिद्धान्तः । आनन्दवृद्धेः कर्मसमुचितज्ञानं कारणमित्यानन्दतीर्थीयः अभिनवसमुच्चयवादः ।।

दशावरार्थकमहाभारतान्तर्गतायाः गीतायाः बह्वर्थगर्भितत्वप्रदर्शनायैव रचिते गीतातात्पर्येपि 'नासतः' इति श्लोकस्य सत्कार्यवादपरत्वनिरासपूर्वं साङ्ख्यमतनिराकरणमपि कृतम्। स्वसिद्धान्त-प्रतिपादितप्रमेयानां गीताक्षरानुगुण्यत्वं च तात्पर्ये प्रथमत एवासूचि । सर्वशास्त्रोत्तमे गीताशास्त्रे 'पुरुषः प्रकृतिस्थो हि भुङ्क्ते प्रकृतिजान् गुणान्' इत्यदिषु पुनरुक्तवदाभासमानप्रमेयानां पौनरुक्त्य-निराकरणपूर्वकं गीताश्लोका व्याक्रियन्त इति निदर्शनं व्याख्याकौशलस्य ।।

तत्र गीताभाष्योक्तप्रमेयाः ईश्वरमधिकृत्य, लक्ष्मीमधिकृत्य, मोक्षमधिकृत्य, भक्तिमधिकृत्य, जीवान् अधिकृत्य एवमेवञ्जातीयकाः स्थूलतयैवं सङ्ग्राह्या भवन्ति ।

**स्थूलतया गीताभाष्योक्तप्रमेयसङ्ग्रहः-**

**ईश्वरविषये-** ईश्वरनित्यत्वम् (२-१२), ईश्वरस्य कर्तृत्वे आक्षेपपरिहारौ (४-१३, १६-८), ईश्वरस्य सर्वभोक्तृत्वम् ( ७-५, ८-४) अवतारेषु भेदाभावः (९-११) उत्पत्त्यभावः (१०-२) अचिन्त्यशक्तिः (११-१६) भोगस्वरूपम् (१५-१०), कर्मदेहाभावः ईश्वरस्य (७-२४) इत्यादि ।

**लक्ष्मीविषये** - लक्ष्म्याः रूपाणि (३-६), लक्ष्मी अतीवभगवत्प्रिया (७-५, १४-६), त्रिगुणाभिमानिनी (७-१४), भगवन्मया (७-१४), चित्तबन्धिका लक्ष्मीः (७-२५), प्रकृति-व्यापरे लक्ष्मी कारणम् (१३-२१) लक्ष्म्याः महत्वम् (१२-१), स्वतन्त्रतयालक्ष्म्युपासने क्लेशः (१२-५), अवतारेष्वपि लक्ष्म्या दुःखो नास्ति(१४-४) इत्यादि ।

**भक्तिविषये-** ६-४६, ७-१७, ७-२९,९-३४, इत्यादि ।

**मोक्षविषये-** मोक्षो हि महापुषार्थः (२-२४ ) मुक्तानामानन्दः (२-५१),मोक्षस्वरूपम् (२-५१), निष्कामकर्मणो मोक्षः (३-४), मोक्षे आनन्दवृद्धिह्रासविचारः (३-१८), तीर्थस्नानादिकं न मोक्षसाधनम् (३-२०), मुक्तेरनधिकारिणः (६-३६), मोक्षकालः (८-१०) , मोक्षे सूक्ष्मसत्वविचारः (१४-२२ ) मोक्षक्रमः (१५-३,४) , मोक्षोपयोगिज्ञानस्वरूपम् (३-४३, ४-९, ४-१७, ८-२) मोक्षे चातुर्वर्ण्यव्यवस्था (६-४५, ९-८) इत्येवमादि ।

**जीवविषये-** देहात्मभेदः (२-१३), जीवः ईश्वरप्रतिबिम्बः (२-२४, १३-२४) जीवः अस्वतन्त्रकर्ता (२-९; १३-२), प्रारब्धकर्मभोगः ( २-७२), जीवीयनित्योपाधिः (२-१८), जीवानन्त्यम् (४-१४), जीवानां कर्माचरणम् (६-३१), जीवानां ज्ञानस्वरूपम्

(७-१५), जीवस्यावरणविचारः (८-४), द्वेषिजीवानां मोक्षाभावः (९-१८) जीवाः चिद्रूपाः (६-९), प्रवृत्त्यादिषु जीवस्यास्वातन्त्र्यम् (१५-९) इत्यादि ।

एवं प्रासङ्गिकतया प्रतिपादितप्रमेयाणि । महाभारतस्य महत्त्वम् (अवतारिका), वेद-प्रामाण्यविचारः (२-१३, ३९,४५), वेदस्यानादिनित्यत्वम् (३-१५) वेदानां भगवत्परत्वम् (२-२४), चार्वाकमतखण्डनम्, भास्करमतखण्डनम्, अद्वैतविशिष्टाद्वैतमतनिरास इत्येवमादि ।।

गीतातात्पर्ये जीवकर्तृत्वम्, साक्षिस्वरूपम्, विशेषस्वरूपम्, सात्त्विकादिविभागः, आपत्कालीनवृत्तिविचार इत्यादिकं विशेषतो निरूपितम् ।।

तत्र गीतायां भाष्ये च सप्तमाध्याये योगिनां गतिवर्णनावसरे अर्चिर्मार्ग-धूममार्गयोर्वर्णनं कृतम् । एतन्मार्गः उपनिषत्सु, ब्रह्मसूत्रभाष्ये, भागवते, भागवततात्पर्येपि तत्र तत्र विक्षिप्य वर्णितः । तदयं गुरुपादोक्तदिशा सङ्ग्रहः -

इमे मार्गे, नाडीद्वारोत्क्रान्तिश्च मानुषानामेव, न देवानाम् ।। त्रिधा ह मार्गो भिद्यते- पितृयानं, देवयानं, ब्रह्मयानमिति । देहमध्ये हितानामैकोत्तरशतनाड्यो वर्तन्ते । मध्ये स्थिता सुषुम्नानाडी, देहस्य दक्षिणभागगताः नाड्यः पिङ्गलानाड्यः देहस्य वामभागगताः इडानाड्यः । तदुक्तं **'पितृयानं देवयानं ब्रह्मयानमिति त्रिधा । गच्छन् वैश्वानरं याति तस्मान्मार्गः स ईरितः । दक्षिणाः पिङ्गलाः सर्वाः इडा वामाः प्रकीर्तिताः । नाड्योऽथ मध्यमाः प्रोक्ताः सुषुम्ना वेदपारगैः** इति (२.२.२७. भा.ता.नि.उ.भागवततन्त्रवचनम्) । आसु नाडीषु सुषुम्नानाडीद्वारा उत्क्रान्ताः ब्रह्मलोकमापद्यन्ते । अस्य मार्गस्य ब्रह्मयान इति सञ्ज्ञा । विषुवाख्यसुखकरत्वादस्य मार्गस्य अयं विषुव इति व्यवह्रियते । पिङ्गाख्यसुखदत्वात् पिङ्गला इति, पितृणाम् इडाख्यान्नदानात् इडा इति सञ्ज्ञा इति ब्रह्मतर्कवचनादवगम्यते ।**'विषुवत्ता ब्रह्मयानो विशेषेण सुखं यतः । पिङ्गला देवयानं स्यात् पिङ्गाखअयसुखदं यतः । इडान्नदानात् पितृणामेवं मार्गाः प्रकीर्तिताः'** इति ।।

तत्र पिङ्गलानाडीभ्य (उत्तरायणरश्मिभिः) उत्क्रान्ताः अर्चिरादिसञ्ज्ञकदेवयानेन गत्वा महरादिलोकगन्तारः । सुषुम्नानाडीभ्य उत्क्रान्ताः, देवयानेन च गताश्च महरादिलोकेषु स्थिताः कालान्तरे ब्रह्मलोकमाप्नुवन्ति । नते पुनरावर्तन्ते सृतिम् । परीक्षिदादयः अप्रतीकालम्बनाः भुवि जाताः सुषुम्नयोत्क्रान्ता अमुक्तवैकुण्ठादिस्थानं प्राप्नुवन्ति । एवम् इडानाडीभ्य (दक्षिणायनरश्मिभिः) उत्क्रान्ताः धूमादिसञ्ज्ञकपितृयानेन गत्वा चान्द्रमसं ज्योतिः पुनरावर्तन्ते[1]।

---

१. ' ते चान्द्रमसमेव लोकमभिजयन्ते । त एव पुनरावर्तन्ते । षट्प्रश्नोपनिषत् ।

पितृयानेन गता अपि जन्मान्तरे देवयानेनावश्यं गन्तार इति बोध्यम् ।।

देवयानमार्गस्थाः अहःशब्देनाभिधीयन्ते । पितृयानमार्गस्थाः रात्रिशब्देनाभिधीयन्ते[१] । इमे देवयान-पितृयाने एव उत्तरायण-दक्षिणायनमार्गौ इति शास्त्रे व्यपदिश्येते ।। एतन्मार्गयोर्लभ्याः न केवलं लोकाः, किन्तु तत्स्था देवाश्च ।।

योगिनां धूमादिलोकप्राप्तिर्नाम- तल्लोकं गत्वा तत्रस्थदेवतां सम्प्राप्य, तद्देवतासत्कारं प्राप्य तदनुज्ञां प्राप्योत्तरत्र गमनम् ।।

पितृयाने प्रथमं धूमस्य प्राप्तिः । धूमादयो नाम धूमाद्यभिमानिदेवताः । एवमुत्तरत्रापि ज्ञातव्यम् । तेषां लोकाः पृथक् सन्ति । योगी तल्लोकं गत्वा तत्रस्थदेवतां सम्प्राप्य तद्देवतासत्कारं प्राप्य तदनुज्ञां प्राप्योत्तरत्र गच्छति। धूमाद्रात्रिम्,रात्रेः कृष्णपक्षम्, कृष्णपक्षाद्दक्षिणायनं गच्छति । तत्र दक्षिणायनपरिवारतया दक्षिणायनगतषण्मासदेवताः पृथक् सन्ति । मासैः परिवृतेन दक्षिणायनेन पूजितो दक्षिणायनाच्चान्द्रमसाख्यस्वर्गप्रदेशविशेषं प्राप्नोति[२] । 'क्षीणे पुण्ये मर्त्यलोकं विशन्ति' इत्युक्तप्रकारेण पुण्यभोगानन्तरं भूमौ प्रजायते ।।

देवयाने प्रथममर्चिषः प्राप्तिः[३] । तल्लोकेऽग्निपुत्रः 'अग्निः' 'अर्चिः' इति रूपद्वयेनाऽस्ते[४] । तत्र प्रथममग्निं गत्वा, अनन्तरं ज्योतिरपरपर्यायम् अर्चिषमाप्नोति[५]। अर्चिषो वायुपुत्रं (प्रवहं) नाम्नाऽतिवाहिकम्[६] , आतिवाहिकाद् वायोः अहर्लोकम् । तत्र मध्यन्दिनापरपर्यायाभिजिता सहितेनाह्ना पूजितः शुक्लम् । तत्र पूर्णिमया सहितेन शुक्लेन पूजित उत्तरायणम् । तत्रोत्तरायण-परिवारभूता उत्तरायणगतषण्मासदेवताः पृथक् सन्ति[७]।

---

१.देवयानस्य मार्गस्थाः अहःशब्दाभिसञ्ज्ञिताः । पितृयानस्य मार्गस्थाः रात्रिशब्दाह्वया मताः।। भा.ता.२.२.२७

२. अयं चान्द्रमसलोकः स्वर्गप्रदेशविशेष इति अवश्यमङ्गीकार्यः । स्वर्गप्राप्तेरुक्तत्वात् ।

३. 'उत्क्रान्तस्तु शरीरात् स्वात् गच्छत्यर्चिषमेव तु । ततो हि वायोः पुत्रं च योऽसौ नाम्नातिवाहिकः ।।
ततोहः पूर्वपक्षं चाप्युदक् संवत्सरं तथा । तटितं वरुणं चैव प्रजापं सूर्यमेव च ।। ब्र.सू.भा.उदाहृत
सोमं वैश्वानरं चेन्द्रं ध्रुवं देवीं दिवं तथा । ततो वायुं परं प्राप्य तेनैति पुरुषोत्तमम्।।' ब्रह्मतर्कवचनम् ४.३.५

४. 'अग्निर्ज्योतिरिति द्वेधैवार्चिषः सम्प्रतिष्ठितिः । अग्निं गत्वा ज्योतिरेति प्रथमं ब्रह्म संव्रजन् ।
'एकस्मिंस्तु पुरे संस्थो द्विरूपोग्नेः सुतो महान्' ब्रह्मतर्तवचनम्. ब्र.सू.भा.४.३.१.

५. 'अग्निं प्राप्य ततश्चार्चिः ,ततश्चाप्यहरादिकम् '(गी.भा.उ.नारदीयवचनम्)।

६. 'प्रवहं वायुपुत्रं च सूर्यसोमौ च विद्युतम् । प्राप्य प्रधानवायुं च याति तत्परमं पदम् ' बृ.उ.भा.उ.वचनम् ।

७. 'पूजितस्त्वयनेनासौ मासैः परिवृतेन हि । अहरभिजिता शुक्लं पौर्णमास्या अयनं विषुवा सह ।'

अत्र भाष्यदीपिकाकाराः 'शुक्लपक्षलोकानन्तरं पूर्णिमादेवलोकः, मासदेवलोकानन्तरं मेष-तुलाख्यविष्वभिमानिदेवतालोकश्च ग्राह्यः । तथाचोक्तं गीताभाष्ये- देवेनाभिजिता शुक्लपक्षेण च सपूर्णिमा । विषुवा चायनेनासौ पूजितः केशवं व्रजेत् इति' इति प्रत्येकं पूर्णिमालोकं मास-देवलोकांश्चाभिप्रयन्ति ।।

मासैः परिवृतेनोत्तरायणेन विषुवा सहितेन पूजितः संवत्सरं याति[१] । [२]संवत्सरात् तटितम्, तटितो वरुणम्[३], वरुणात् प्रजापतिम्, प्रजापतेः सूर्यम्, सूर्यात् सोमम् । सोमाद् वैश्वानरम्, वैश्वानराद् इन्द्रम् । तत्रेन्द्रो न स्वर्गस्थः, किन्तु शिंशुमारलाङ्गूलाश्रितः[४], ध्रुवादपि नीचस्थाने स्थितः इन्द्राख्यो नक्षत्रलोकः । अयं लोकः शिंशुमारं प्रदक्षिणीकुर्वन्नाऽस्ते । तत्रस्थ इन्द्रः[५] । इन्द्राद् ध्रुवम् , ध्रुवाद् द्युनामिकभारतीम् ,दिवः प्रधानवायुं गच्छति ।

[६]द्युसमीपे विश्वाद्या अनिरुद्धाद्याश्च सन्ति । ते द्विविधाः । भगवद्रूपभूताः भारतीपुत्रभूताश्च । भागवततात्पर्योक्तदिशा तानपि प्राप्नोति । तेच पूर्वेपूर्वे उत्तरोत्तरप्रापकाः । तथाच ध्रुवानन्तरं विश्वप्राप्तिः, ततः तैजस-प्राज्ञ-तुर्यप्राप्तिः । ततः अनिरुद्ध-प्रद्युम्न-सङ्कर्षण-वासुदेवाः । एते दिवस्पुत्राः । द्युनामका भारती त्वेनं प्रधानवायुसमीपं नयतीति विवेकः ।।

अत्रेदमप्यवधेयम् - मोक्षो नाम न केवलं वैकुण्ठादिप्राप्तिः, परब्रह्मप्राप्तिरपि । परब्रह्मप्राप्तिरपि सार्ष्टिसायुज्यादिभेदेन पञ्चधा । तत्र प्रतीकालम्बनानां स्वदेह एव ब्रह्मदृष्ट्या ब्रह्मसलोकतावाप्तिः । प्रलयादर्वाक् परब्रह्मसमानलोकावाप्तिः नतु वैकुण्ठप्राप्तिः । परब्रह्मणो वैकुण्ठेतरलोकेष्वप्य-वस्थानात् । तथाच वायुद्वारा कार्यब्रह्मप्राप्तिः प्रतीकालम्बनानाम् । अप्रतीकालम्बनानां परब्रह्म-प्राप्तिः ।।

---

१. 'मासेभ्यः संवत्सरं .... ' ४.४.४ ब्र.सू.भा. कौण्डिन्यश्रुतिः ।

२. 'संवत्सरात् तटितम् आगच्छति, तटितः प्रजापतिलोकम्' ब्र.सू.भा ४..३.३.गौपवनश्रुतिः ।

३. 'तत्र तटितो वरुणं गच्छति । तटिता ह्यूह्यते वरुणलोकः ...' ब्र.सू.भा ४..३.३.श्रुतिः ।

४. 'लाङ्गूले प्रजापतिरग्निरिन्द्रो धर्मः' इति भागवते पञ्चमे २३ अध्याये । एत अग्न्यादयो न देवाः । शिंशुमाराश्रित-ज्योतिश्चक्रतारादिवर्णनप्रसङ्गात् प्रजापत्यादयः चत्वारः अपि नक्षत्रलोकविशेषा एव ।

५. अवश्यं चैवमङ्गीकर्तव्यम् । ऊर्ध्वगतिर्ह्यत्रोच्यते । ध्रुवादपि पूर्वं प्राप्यस्य इन्द्रस्य(तल्लोकस्य) ध्रुवापेक्षया नीचस्थानस्थत्वेन भाव्यत्वात् ।

६. 'विश्वाद्या अनिरुद्धाद्याः ते द्विधा सम्प्रकीर्तिताः । विष्णुरूपास्तदन्ये च तान् सर्वान् याति मोक्षगः ।।
विष्णुरूपास्तदन्ये च तान् सर्वान् याति मोक्षगः । तदन्ये च दिवस्पुत्राः सर्वे च द्युसमीपगाः ।।
ते दिवं प्रापयन्त्येनं स वायुं स हरिं पृथक् । विश्वादिरूपं तुर्यश्च वासुदेवश्च नापरः ' भा.ता.नि ७स्कन्धे.

अत्र मार्गकथनावसरे ये देवयानेन गन्तारः तेषां महरादिलोकप्राप्तिरुच्यते । तेषां लोकानामुच्चावचत्वं भूप्रमाणतः प्रथममवसेयम् । यतः लोकाः द्विविधाः भूसम्बन्धिनः तदसम्बन्धिनश्चेति । अत्र प्रकरणे भूलोकमारभ्य उपरि लक्षयोजनपर्यन्तं भूसम्बन्धिन इति व्यवहारः । एतेषु महामेरुस्थब्रह्मसदनमारभ्य उपरितनलोकान् प्राप्तानां भुवि जनिर्नास्ति । मेरुसदनात् अर्वाक् स्थितविद्याधरादिलोकप्राप्तानां पुनरावृत्तिर्विद्यते ।।

भूसम्बन्धरहिताः अनेके लोकाः अन्तरिक्ष-स्वर्गयोः सन्ति । एकविंशत्सहस्राणि इति सङ्ख्यां निर्दिशन्ति साम्प्रदायिकाः । स्वर्गलोकादुपरि महर्जनस्तपोलोकाः सन्ति । तदुपरि बहुकोटियोजनदूरे वैकुण्ठलोक इति स्थितिः । अत्र जनोलोकमारभ्य उपरितनलोकान् प्राप्तानां पुनर्जन्म नास्ति इत्यत्र न केवलं लोकं प्राप्तानां जन्माभावः किं नाम तल्लोकस्थभगवद्रूपविशेषं प्राप्तानामिति ज्ञातव्यम् । लोकप्राप्तिरपि न यथाकथञ्चित् तत्र स्थितिर्वा लोकगमनम् वा, किं नाम उत्क्रान्तिमार्गेण लोकगमनम् । अत एव वैकुण्ठे द्वारपालकयोः जयविजययोः तथा ब्रह्मसदनं प्राप्तस्यापि रेवतीसहितस्य ककुद्मिनः पुनः भूलोकप्राप्तिर्युज्यते ।।

किञ्च 'महर्लोकादिगन्तारः उत्तरायणरश्मिभिः' इत्युक्तदिशा उत्तरायणरश्मिभिः उत्क्रान्तानां महर्लोकप्राप्तिः श्रूयते । तेषां च पुनर्जन्म नास्ति । अतः 'आजनात् न जनिर्भुवि' इति वचनं महर्लोकस्याप्युपलक्षणमिति भाति । 'मध्यमाज्जनलोकादिः उत्तमस्त्वेव मुक्तिदः' इति सूत्रभाष्यवचनात् श्रवणादिभिः मध्यमप्रसादः । मध्ममप्रसादात् जनलोकादिप्राप्तिरिति । तेन श्रवणादिना जनलोकादिं प्राप्तानामप्युत्तमप्रसादाभावेन अपरोक्षज्ञानाभावात् तत एव तल्लोकस्थ-भगवत्प्राप्तेरप्यभावात् अवशिष्टसाधनसम्पत्त्यर्थं पुनर्जनिरवश्यमङ्गीकर्तव्या । 'मध्यमाज्जनलोकादिः' इत्यत्र आदिशब्देन महर्लोकस्य ग्रहणम् । अन्यथा कर्मणा स्वर्गलोकप्राप्तिमुक्त्वा श्रवणादिना जनलोकादिप्राप्तौ मध्यस्थितमहर्लोकप्राप्तिः केषामित्यनुक्तिः स्यात् ।।

एते मार्गाः देहादुत्क्रान्तानामेव । नान्येषाम् । मानुषेभ्यः अवराः नैव उत्क्रान्ता भवन्ति । त अत्रैव मुच्यन्ते । तेषां विरजास्नानमपि नास्ति । केवलभगवत्कृपया अत्रैव ते विलिङ्गा भवन्ति इति श्रीवाजिराजतीर्थश्रीमच्चरणानामाशयः ।।

गीतासूत्रोपनिषदां भाष्यभावः सतां मुदे ।
सङ्गृहीतो यथाशक्ति सत्कृपालेशतो गुरोः ।।

गीताशब्दार्थविवरणावसरे गीताभाष्ये तात्पर्ये च कचिदेकरूप्यता, कचिद्वैलक्षण्यम्, कचित् भाष्योक्तस्य विवरणं तात्पर्ये, कचित् भाष्योक्तार्थे प्रमाणोदाहरणमित्याद्यवगम्यते ।

तद्यथा- **गीताभाष्य-तात्पर्ययोः शब्दार्थनिरूपणावसरे वैलक्षण्यम् ।**

| अ.श्लो. शब्दः | गीताभाष्यम् | गीतातात्पर्यम् |
|---|---|---|
| १. ३-३. निष्ठा | स्थितिः | पर्यवसितिः मुक्तिः |
| २. ३-९. यज्ञार्थात् | यज्ञो भगवान् | 'ज्ञो नाम भगवान् विष्णुः' |
| ३. ३-१७. तृप्तिः | अन्यत्रालम्बुद्धिः | तृप्तिस्तु कृतकृत्यता |
| ४. ३-१७. सन्तोषः | सन्तोषस्तृप्तिकारणम् | 'सन्तोषस्तृप्तिरापूर्तिः प्रीतिः पर्यायवाचकाः' |
| ५. ३-३३ प्रकृतिः | पूर्वसंस्कारः | शब्दनिर्णयवचनोदाहरणम् |
| ६. ४-६ आत्ममायया | आत्मज्ञानेन | आत्मेच्छया |
| ७. ४.१३ कर्ता | क्रियायां वैलक्षण्यात् कर्ताप्यकर्ता | प्रमाणवचनोदाहरणम् |
| ८. ४-१८ अकर्मणि | सुप्त्यादौ | विष्णौ |
| ९. ४-२४. ब्रह्मकर्मसमाधिना | समाधिना सह ब्रह्मैव कर्म | ब्रह्मणः कर्म समाधिना सह |
| १०. ४-३३. अखिलम् | उपासनाद्यङ्गयुक्तम् | आसमन्तादल्पम् |
| ११. ७-२७. द्वन्द्वमोहेन | सुखदुःखादिविषयमोहेन | द्वन्द्वमोहः निय्यामानम् |
| १२. ८-६ मद्भावं | मद्धद्भावं | मयि सत्ताम् |
| १३. १७-३. सत्वानुरूपा | चित्तानुरूपा | जीवानुरूपा |

गीताभाष्य-तात्पर्ययोः गीताशब्दार्थनिरूपणे ऐकरूप्यम्

| अ.श्लो. | भाष्यम् | तात्पर्यम् |
|---|---|---|
| ६-३ | योगारूढस्य सम्पूर्णोपायस्य | सम्पूर्णोपायो योगारूढः |
| ६-२० | आत्मानं भगवन्तं | आत्मानं विष्णुम् |
| ६-२९ | उभयत्रापि एकमेव प्रमाणवचनमुदाहृतम् | |
| ६-३१ | सर्वत्र एक एवेन्वरः इति स्थितः | सर्वत्र विष्णुेक इति स्थितः |
| ६-३७ | अयतिः अप्रयत्नः | अयतिः अप्रयत्नः |
| ७-२७ | सर्गे सर्गकाले आरभ्यैव | सर्गे सर्गे काल एव |
| ८-१७ | सहस्रशब्दो अनेकवाची | सहस्रमिति बह्वेव |

※ भाष्योक्तार्थे संवादिप्रमाणोदाहरणं तात्पर्ये यथा -४-१० श्लोके 'मन्मयाः ' इत्यस्य, ५-७ श्लोके 'सर्वभूतात्मभूतात्मा' इत्यस्य । एवम् ६-९ , ६-३७ इत्यादयः ग्राह्याः ।।

※ एकस्मिन्नेव विषये भाष्य-तात्पर्ययोः प्रमाणवचनैः विषयविस्तारः यथा - ३-४ श्लोके यज्ञोत्पत्तिविचारः।६-४७ध्यानविचारः।७-१७भक्तिविचारः।८-४ अधिभूतादिशब्दार्थविचारः। ८-२० प्रलयविचारः इत्येवमादयः ।।

### गीताभाष्यप्रमेयदीपिका- गीतातात्पर्यन्यायदीपिका

श्रीमज्जयतीर्थैः विरचिता गीताभाष्यटीका प्रमेयदीपिका इति प्रथिता । गीतात्पर्यटीका तु न्यायदीपिका इति । श्रीपद्मनाभतीर्थानां भावप्रदीपिका एवं श्रीनरहरितीर्थाणां भावप्रकाशिकटीकातः अतिविस्तृततया गीताभाष्यभावं व्यञ्जयतीयं टीका । अतीव सूक्ष्मानि प्रमेयानि अत्र टीकाकाराः सुस्पष्टयन्तीन्यन्वर्थं नामास्याः ।।

न केवलं भाष्यभावस्पष्टीकरणमात्रमत्र, किं नाम भाष्यान्तरेषु विद्यमानगीतापाठभेदान् गीतापव्याख्यानानि च विमृश्य निराक्रियन्ते । प्रमेयदीपिकायां साक्षात् गीताश्लोकानामवतारिका नोच्यते न्यायदीपिकायां गीताश्लोकमवतार्य तात्पर्यं व्याख्यायत इत्ययं भेदः प्रमेयन्यायदीपिकयोः स्फुटमवगम्यते ।।

